# ಶ್ರೀವಿಷ್ಣುಸ್ತುತಿಃ

ಕವಿಕುಲತಿಲಕ ಶ್ರೀಮತ್ ತ್ರಿವಿಕ್ರಮಪಂಡಿತಾಚಾರ್ಯವಿರಚಿತಾ ।
ಶ್ರೀವರದರಾಜಾಚಾರ್ಯವಿರಚಿತ ಸಂಸ್ಕೃತಟೀಕಾ -
ಕರ್ನಾಟಕಭಾಷಾನುವಾದಾದಿ ಸಹಿತಾ ಚ ।



ಸಂಪಾದಕ-ಅನುವಾದಕ
ದಿ ॥ ಆಚಾರ್ಯ ಸಾಣೂರು ಭೀಮಭಟ್ಟ

ಅಧಿಕ ಮಾಸ ಪ್ರಯುಕ್ತ ದಾನರೂಪವಾಗಿ
ಆಶೀರ್ವಾದ ಪೂರ್ವಕ ಕೊಟ್ಟಂತ ಪುಸ್ತಕ
4-6-2007

# ಶ್ರೀವಿಷ್ಣುಸ್ತುತಿಃ

**ಕವಿಕುಲತಿಲಕ ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯವಿರಚಿತಾ।**
**ಶ್ರೀವರದರಾಜಾಚಾರ್ಯವಿರಚಿತ ಸಂಸ್ಕೃತಟೀಕಾ -**
**ಕರ್ನಾಟಕಭಾಷಾನುವಾದಾದಿ ಸಹಿತಾ ಚ।**


ಸಂಪಾದಕ–ಅನುವಾದಕ
**ದಿ॥ ಆಚಾರ್ಯ ಸಾಣೂರು ಭೀಮಭಟ್ಟ**



ಪ್ರಕಾಶನ
**ಪ್ರಸಂಗಾಭರಣತೀರ್ಥ ಪ್ರಕಾಶನ**
ನಂ ೨೨/೪, ಈಶಾವಾಸ್ಯಂ, ೬ನೇ ಅಡ್ಡರಸ್ತೆ
ಅಪ್ಪುರಾವ್ ರಸ್ತೆ, ಚಾಮರಾಜಪೇಟೆ
ಬೆಂಗಳೂರು– ೫೬೦ ೦೧೮

**ಸಂಪಾದಕ-ಅನುವಾದಕ**

**ದಿ॥ ವಿದ್ವಾನ್ ಆಚಾರ್ಯ ಸಾಣೂರು ಭೀಮಭಟ್ಟರು**

ಪ್ರಕಾಶನ :

ಪ್ರಸಂಗಾಭರಣತೀರ್ಥ ಪ್ರಕಾಶನ

ಮೊದಲನೆ ಆವೃತ್ತಿ : 1982

ದ್ವಿತೀಯ ಆವೃತ್ತಿ : 2006

ಪ್ರತಿಗಳು : 2000

ಬೆಲೆ : ರೂ. ಮೂವತ್ತು (ರೂ30/-)

ಮುಖಪುಟಚಿತ್ರ : ಶ್ರೀವಿಷ್ಣುಮೂರ್ತಿ ದೇವರು,
ಆಲೆವೂರು, ಉಡುಪಿ ಜಿಲ್ಲೆ

ಮುದ್ರಣ : ಶ್ರೀರಂಗ ಪ್ರಿಂಟರ್ಸ್ ಪ್ರೈ. ಲಿ.
517, ಸಮುದ್ರಗುಪ್ತ ಮೌರ್ಯ ರಸ್ತೆ
ಭವಾನಿನಗರ, ಬೆಂಗಳೂರು – 560 019
ದೂರವಾಣಿ : 080–26524757

# ಮುನ್ನುಡಿ

ಭಾರತಭೂಮಿಯ ದಕ್ಷಿಣಕರ್ನಾಟಕವೆಂದು ಪ್ರಸಿದ್ಧವಾದ ದಕ್ಷಿಣಕನ್ನಡಜಿಲ್ಲೆಗೆ ಸೇರಿದ್ದ ಕಾಸರಗೋಡಿನ ಕುಂಬಳೆ ಎಂಬ ಪ್ರದೇಶದಲ್ಲಿ ಜಯಸಿಂಹನೆಂಬ ದೊರೆಯು ರಾಜ್ಯ-ವಾಳುತ್ತಿದ್ದನು. ಶ್ರೀಮಧ್ವಾಚಾರ್ಯರು ಉಡುಪಿಯ ಸಮೀಪದಲ್ಲಿ ಅವತರಿಸಿ ಲೋಕವನ್ನು ಪಾವನಗೊಳಿಸುತ್ತಿರುವ ಆ ಕಾಲದಲ್ಲಿ ಜಯಸಿಂಹರಾಜನು ಆಚಾರ್ಯರನ್ನು ತನ್ನ ನಾಡಿಗೆ ಒಂದುಬಾರಿಯಾದರೂ ಬರಬೇಕೆಂದು ಭಕ್ತಿಯಿಂದ ಕೇಳಿಕೊಂಡಾಗ ಆಚಾರ್ಯರು ವಿಷ್ಣುಮಂಗಲವೆಂಬ ದಿವ್ಯಕ್ಷೇತ್ರಕ್ಕೆ ಬಂದು ಅಲ್ಲಿ ಜಯಸಿಂಹರಾಜನನ್ನು ಅನುಗ್ರಹಿಸಿದರು. ವಿಷ್ಣುಮಂಗಲ ದೇವಾಲಯದಲ್ಲಿ ಆಚಾರ್ಯರ ಸ್ವಾಗತಕ್ಕಾಗಿ ನೆರೆದಿದ್ದ ಅಸಂಖ್ಯನರನಾರಿಯರ ಸಭೆಯಲ್ಲಿ ಋಜುಪುಂಗವರೆಂದು ಪ್ರಸಿದ್ಧರಾದ ಆಚಾರ್ಯರು ಮೇಘಗಂಭೀರಧ್ವನಿಯಿಂದ ಭಾಗವತಪ್ರವಚನ ಮಾಡಿದರು. ಆಚಾರ್ಯರನ್ನೂ ಅವರ ಪ್ರವಚನದ ಮಾದರಿ, ಭಾಷೆಯ ಮಾದರಿ, ವೈದುಷ್ಯದ ಚಾತುರ್ಯ, ವಾಗ್ವೈಖರಿಗಳನ್ನು ಕಂಡು, ಕೇಳಿ ಜನ ಪುಲಕಿತರಾದರು. ರಾಜನು ತನ್ನ ಭಾಗ್ಯಕ್ಕೆ ಎಣೆಯಿಲ್ಲವೆಂದುಕೊಂಡನು. ರಾಜನು ಕಳೆದುಹೋದ ಆಚಾರ್ಯರ ಗ್ರಂಥಭಂಡಾರವನ್ನು ಪತ್ತೆಮಾಡಿ ತರಿಸಿ ಸ್ವೀಕರಿಸಬೇಕೆಂದು ಬಿನ್ನವಿಸಿದಾಗ ಆಚಾರ್ಯರು ಅದನ್ನು ಸ್ವೀಕರಿಸಿ ರಾಜನನ್ನು ಹರಸಿದರು.

ಇಂತಹ ಸಭೆಗೆ ತೇಜಃಪುಂಜವಾದ ವ್ಯಕ್ತಿಯೊಂದು ಪ್ರವೇಶಿಸಿ ಆಚಾರ್ಯರ ಪಾದಗಳಿಗೆ ನಮಿಸಿ, ಪಕ್ಕದಲ್ಲಿ ನಮ್ರನಾಗಿ ಕುಳಿತಿದ್ದ ಜಯಸಿಂಹದೊರೆಯನ್ನು ಅವಲೋಕಿಸಿ ಗಂಭೀರಧ್ವನಿಯಿಂದ ಆಶೀರ್ವಾದಪದ್ಯವೊಂದನ್ನು ಹಾಡಿತು.

ಸ್ವಃಸುಂದರೀಭುಜಲತಾಪರಿರಂಭಣೇ ಧೂಃ
ಪೌರಂದರೀ ಭವತಿ ಯಂ ಭಜತಾಂ ಭುಜಿಷ್ಯಾ ।
ಆನಂದತೀರ್ಥಭಗವತ್ಪದಪದ್ಮರೇಣುಃ
ಸ್ವಾನಂದದೋ ಭವತು ತೇ ಜಯಸಿಂಹಭೂಪ ॥

ಆನಂದತೀರ್ಥಭಗವತ್ಪಾದರ ಅಡಿದಾವರೆಯ ಹುಡಿಯನ್ನು ಮುಡಿಯಲ್ಲಿ

ಮುಡಿದವನಿಗೆ ಸ್ವರ್ಗದ ಸಿರಿಯು ಕಿಂಕರಿಯಾಗುತ್ತಾಳೆ. ಇಂತಹ ಧೂಳಿನ ಕಣವು ನಿನಗೆ ಆನಂದವನ್ನು ನೀಡಲಿ.'' ಈ ಆಶೀರ್ವಾದದ ಸೊಗಸು ಸೌಂದರ್ಯವನ್ನು ಸವಿದ ಸಭೆಯು ಮುಗ್ಧವಾಯಿತು. ಇವರೇ ತೌಳವದೇಶದ ದಕ್ಷಿಣಕರ್ನಾಟಕದ ಸುಪ್ರಸಿದ್ಧ ಅದ್ವೈತ-ವಿದ್ವಾಂಸರಾದ ಶ್ರೀತ್ರಿವಿಕ್ರಮಪಂಡಿತಾಚಾರ್ಯರು.

ಆಂಗಿರಸಗೋತ್ರದ ಸುಬ್ರಹ್ಮಣ್ಯಪಂಡಿತರೆಂಬ ಲಿಕುಚವಂಶದ (ಪೆಜತ್ತಾಯ) ವಿದ್ವದ್ವರೇಣ್ಯರ ಮಕ್ಕಳಿವರು. ಇವರ ತಂದೆತಾಯಿಗಳು ಹರಿಹರೇಶ್ವರರ ಸೇವೆಮಾಡಿ ಪಡೆದ ಮಕ್ಕಳಿವರು. ಬಾಲ್ಯದಲ್ಲಿಯೇ ತ್ರಿವಿಕ್ರಮಪಂಡಿತರು ಸಂಸ್ಕೃತದಲ್ಲಿ ಒಳ್ಳೆಯ ಪದ್ಯಗಳನ್ನು ರಚಿಸಿ ಮಧುರವಾಗಿ ಹಾಡುತ್ತಿದ್ದರು. ಭಿಕ್ಷುಕನೊಬ್ಬನು ಮನೆಗೆ ಭಿಕ್ಷೆಗೆ ಬಂದಾಗ ಅವರು ಹೇಳಿದ ಪದ್ಯವೊಂದು ಇಂತಿದೆ —

**ಏಕಃ ಕ್ಷಪಣಕ ಶಾಕಾಹರ್ತಾ ಬಹವಃ ಕ್ಷಪಣಕ ಶಾಕಾದಾನಾಃ ।**
**ಯತ್ರ ಕ್ಷಪಣಕ ಬಹುಶಾಕಾದಾಃ ತತ್ರ ಕ್ಷಪಣಕ ಶಾಕಾಶಾ ಕಾ ॥**

ಭಿಕ್ಷುಕನೇ ! ನಮ್ಮಲ್ಲಿ ತರಕಾರಿ ತರುವವನೊಬ್ಬನೇ. ತಿನ್ನುವವರು ಬಹಳ ಮಂದಿ. ತಿನ್ನುವವರು ಬಹಳ ಜನರಿರುವಲ್ಲಿ ಮತ್ತೊಬ್ಬರಿಗೆ ನೀಡಲು ಸಿಗುವುದೇನು ?

ಚಿಕ್ಕಬಾಲಕನಾಗಿದ್ದಾಗಲೇ ಉಷಾಹರಣವೆಂಬ ಭಾವಬಂಧುರವಾದ ಅರ್ಥಸುಂದರ-ವಾದ ಮಹಾಕಾವ್ಯವನ್ನು ಇವರು ರಚಿಸಿದರು. ತ್ರಿವಿಕ್ರಮರಿಗೆ ಎಲ್ಲಾ ಶಾಸ್ತ್ರಗಳಲ್ಲೂ ಅಸಾಧಾರಣಪರಾಕ್ರಮ. ವೇದವೇದಾಂತಗಳು ಅಂಗೈಯಲ್ಲಿನ ನೆಲ್ಲಿಕಾಯಿಯಂತೆ. ಅದ್ವೈತವೇದಾಂತದ ಒಂದೂಕಾಲು ಲಕ್ಷಗ್ರಂಥಗಳು ಅವರ ಮುಖೋದ್ಗತವಾಗಿದ್ದವು. ಭಾಸ್ಕರಮತದ ಭಾನುಪಂಡಿತನೆಂಬುವನು ತರುಣ ಪಂಡಿತಭಾನುಗಳಾದ ತ್ರಿವಿಕ್ರಮರ ಜೊತೆಗೆ ವಾದಕ್ಕಿಳಿದು ಮಿಂಚುಹುಳುವಾದನು. ಸೋತುಹೋದನು. ತ್ರಿವಿಕ್ರಮರು ಎಲ್ಲೆಡೆ ವಾದಿಗಳನ್ನು ಜಯಿಸಿ ಜಯಭೇರಿ ಬಾರಿಸಿ ತಂದೆಯ ಬಳಿಗೆ ಬಂದಾಗ ತಂದೆಯು 'ಮಗೂ ನೀನು ಮೋಕ್ಷಪಡೆಯಲು ಬಯಸುವಿಯಾದರೆ ನಿರ್ದೋಷಗುಣಪೂರ್ಣನಾದ ವಾಸುದೇವನನ್ನು ಭಜಿಸು. ನಿರ್ಗುಣೋಪಾಸನೆಯನ್ನು ಬಿಡು' ಎಂದರು. ತ್ರಿವಿಕ್ರಮರ ಮನಸ್ಸಿನಲ್ಲಿ ಹೊಯ್ದಾಟ ಪ್ರಾರಂಭವಾಯಿತು. ಅವರು ಬ್ರಹ್ಮಸೂತ್ರಗಳ 21 ಭಾಷ್ಯಗಳನ್ನು

ಪರಿಶೀಲಿಸಿದರು. ಎಲ್ಲವೂ ಸೂತ್ರವಿರುದ್ಧ- ಪರಸ್ಪರವಿಸಂಗತ ಆಗಿಕಂಡವು. ಆದರೂ ಬೇರೆ ಉಪಾಯವಿಲ್ಲದೆ ಶಂಕರಭಾಷ್ಯದ ಪಾರಾಯಣ ಪ್ರವಚನಮಾಡುತ್ತಿದ್ದರು. ಆಚಾರ್ಯರು ಅದ್ವೈತವನ್ನು ಖಂಡಿಸುವುದನ್ನು ಸಹಿಸಲಾರದೇ ಇದ್ದರೂ ಆಚಾರ್ಯರ ಜೊತೆಗೆ ವಾದಮಾಡುವ ಸಾಹಸವಿಲ್ಲದ ಪಂಡಿತರು ತ್ರಿವಿಕ್ರಮರನ್ನು ಹುರಿದುಂಬಿಸಿದರು. ಪಾಡಿಕೂಡಲು ಎಂಬಲ್ಲಿಯ ದೇವಾಲಯದಲ್ಲಿ ಮಧ್ವ-ತ್ರಿವಿಕ್ರಮರಿಗೆ ವಾದ ನಡೆಯಿತು. ಅನೇಕ ದಿನ ವಾದ ನಡೆದು ತ್ರಿವಿಕ್ರಮರು ಸೋತು ಮಧ್ವರ ಪಾದಗಳಿಗೆರಗಿ ಶಿಷ್ಯರಾದರು. ಇವರು ಆಚಾರ್ಯರ ಬ್ರಹ್ಮಸೂತ್ರಭಾಷ್ಯಕ್ಕೆ 'ತತ್ತ್ವಪ್ರದೀಪ' (ತತ್ತ್ವದೀಪಿಕಾ) ಎಂಬ ಅನರ್ಘವ್ಯಾಖ್ಯಾನವನ್ನು ರಚಿಸಿದರು. ಇದು ಬ್ರಹ್ಮಸೂತ್ರಭಾಷ್ಯಪಾರಿಜಾತದ ಮಕರಂದ ಧಾರೆಯಂತಿದೆ. ಇದು ಗ್ರಂಥಕರ್ತರಾದ ಮಧ್ವರ ಮಹಿಮೆ- ಗ್ರಂಥ ಪ್ರತಿಪಾದ್ಯನಾದ ನಾರಾಯಣನ ಹಿರಿಮೆಗಳಿಗೆ ತೋರಿದ 'ಮಣಿದೀಪಿಕೆ'. ಇವರೇ ಆಚಾರ್ಯರ ಹನುಮ-ಭೀಮ-ಮಧ್ವ ಎಂಬ ಮೂರು ರೂಪಗಳನ್ನು ಕಂಡಾಗ ಮಂತ್ರತುಲ್ಯವಾದ ಹರಿವಾಯುಸ್ತುತಿಯನ್ನು ರಚಿಸಿದರು. ಇವರ ಮತ್ತೊಂದು ಗ್ರಂಥ ಈಗ ಪ್ರಕಾಶಿತವಾಗು-ತ್ತಿರುವ ವಿಷ್ಣುಸ್ತುತಿ.

ಈ ವಿಷ್ಣುಸ್ತುತಿಯು ಅನರ್ಘ್ಯವಾದ ಸ್ತೋತ್ರರತ್ನ. ಮಹಾಪುರುಷರಲ್ಲಿ ಮೂವತ್ತೆರಡು ಲಕ್ಷಣಗಳಿರುತ್ತವೆ ಎಂಬುದಕ್ಕೆ ದ್ಯೋತಕವಾಗಿಯೋ ಎಂಬಂತೆ 32 ಶ್ಲೋಕಗಳು ಇಲ್ಲಿವೆ.

ಇಲ್ಲಿ ಶ್ರೀವಿಷ್ಣುವಿನ ಪಾದಧೂಳಿಯ ಸ್ತೋತ್ರವನ್ನು ಮೊದಲು ಮಾಡಿ 'ಆ ಪಾದಧೂಳಿಯನ್ನೇ ಸ್ತೋತ್ರಮಾಡಲು ಸಾಧ್ಯವಿಲ್ಲ. ಸರ್ವಜ್ಞಳಾದ ಲಕ್ಷ್ಮೀದೇವಿಯೇ ಪಾದಗಳ ಒಂದು ಕಿರುಬೆರಳಿನ ಉಗುರಿನ ಗುಣಗಳನ್ನೇ ಎಣಿಸಲಾರದೆ ಹೊಸ ಹೊಸ ವಿಶೇಷಗಳನ್ನು ನೋಡುತ್ತಾ ಕುತೂಹಲಸಮುದ್ರದಲ್ಲಿ ಮುಳುಗುತ್ತಾಳೆ. ಬ್ರಹ್ಮಾದಿಗಳೂ ಅದರ ಅನಂತಗುಣಗಳ ಅಂಶಗಳ ಒಂದಂಶವನ್ನಷ್ಟೇ ವರ್ಣಿಸಲು ಸಮರ್ಥರು. ಹೀಗಿರುವಾಗ ನಮ್ಮಂತಹವರು ಪರಮಾತ್ಮನ ಗುಣಗಳನ್ನು ವರ್ಣಿಸಲು ಹೇಗೆ ಸಮರ್ಥರಾಗುತ್ತಾರೆ ? ಆದರೂ ನಾವು ಆ ಬ್ರಹ್ಮಾದಿಗಳನ್ನು ಪ್ರಾರ್ಥಿಸಿ ಅವರ ಕರುಣೆಯ ಬಲದಿಂದ ಒಂದಿಷ್ಟು ವರ್ಣಿಸಲು ಪ್ರಾರಂಭಿಸಿದ್ದೇವೆ. ಶ್ರೀಹರಿಯ ಪಾದನಖವು ಬ್ರಹ್ಮಾಂಡಕಟಾಹವನ್ನು ಭೇದಿಸಿ ದೇವಗಂಗೆಯನ್ನು ಬ್ರಹ್ಮಾಂಡದೊಳಗೆ ಹರಿಸಿದೆ.

ಶ್ರೀಹರಿಯ ಎರಡು ಪಾದಗಳ ನಖಮಣಿಗಳಿಂದ ನಮ್ಮ ಅಂತಃಕರಣವು ಪ್ರಕಾಶಿತವಾಗಲಿ. ಶ್ರೀವಿಷ್ಣುವು ತನ್ನ ಭಕ್ತರಾದ ಗಿರಿಶಾದಿಗಳ ಸೇವೆಗಾಗಿ ಪಾದವನ್ನು ಮುಂದೆ ಚಾಚುವ ವಿಲಾಸವು ಅತ್ಯದ್ಭುತವಾದುದು. ಪರಮಾತ್ಮನ ಕಣಕಾಲುಗಳೆರಡೂ ಎರಡು ದೀಪದ ಕಂಭಗಳಂತಿದ್ದು ನಮ್ಮ ಧ್ಯಾನದ ದಾರಿಯಲ್ಲಿ ಬರುವ ಕತ್ತಲನ್ನು ನಾಶಪಡಿಸಲಿ. ಪರಮಾತ್ಮನ ಎರಡು ತೊಡೆಗಳು ಸೌಂದರ್ಯಮುಂತಾದ ಅನಂತಕಲ್ಯಾಣಗುಣಗಳಿಂದ ತುಂಬಿದ್ದು ಗಟ್ಟಿಯಾಗಿದ್ದರೂ ಮೃದುವಾಗಿದೆ. ಸೊಂಟದ ಪಟ್ಟಿಯು ಮೇರುಪರ್ವತದ ಮಧ್ಯದಲ್ಲಿ ಹರಿಯುವ ಚಿನ್ನದ ರಸಪ್ರವಾಹದಂತಿದೆ. ನಾಭಿಯಲ್ಲಿ ಹುಟ್ಟಿದ ಕಮಲದಲ್ಲಿ ಬ್ರಹ್ಮದೇವರು ದುಂಬಿಯಂತಿದ್ದು ವೇದಪಾರಾಯಣ ಮಾಡುತ್ತಿದ್ದಾರೆ. ಪರಮಾತ್ಮನ ಉದರವು ಕೃಶವಾದರೂ ಸೃಷ್ಟಿಪ್ರಳಯಗಳೆರಡರಲ್ಲಿಯೂ ಅಖಿಲವನ್ನೂ ತುಂಬಿಕೊಂಡಿದೆ. ಎದೆಯ ಮುತ್ತಿನ ಮಾಲೆಯು ಅರ್ಧದಲ್ಲಿ ಎಡ ಎದೆಯಲ್ಲಿರುವ ಲಕ್ಷ್ಮಿಯ ಪ್ರತಿಬಿಂಬದಿಂದ ಕೂಡಿ ಅಲ್ಲಾಡುತ್ತಾ ಲಕ್ಷ್ಮೀದೇವಿಯನ್ನು ಉಯ್ಯಾಲೆಯಲ್ಲಿ ತೂಗುವಂತಿದೆ. ಕೌಸ್ತುಭಮಣಿಭಾಸಕವಾದ ಹರಿಯ ವಕ್ಷಃಸ್ಥಲವು ಧ್ಯಾನಮಾಡಲು ಯೋಗ್ಯವಾಗಿದೆ. ಹರಿಯ ಅಲಂಕಾರಾದಿಗಳು ತಮ್ಮ ಶೋಭೆಗಾಗಿಯೇ ಪರಮಾತ್ಮನನ್ನು ಆಶ್ರಯಿಸಿವೆ. ಪರಮಾತ್ಮನಿಗೆ ಅವುಗಳಿಂದ ಏನೂ ಆಗಬೇಕಾಗಿಲ್ಲ. ಪುಷ್ಟವಾದ ಅಲಂಕೃತವಾದ ನಾಲ್ಕು ಬಾಹುಗಳು ಭಕ್ತರಿಗೂ ತಮ್ಮ ಸಾರೂಪ್ಯವನ್ನು ಕೊಡುತ್ತವೆ. ಶಂಖ, ಚಕ್ರ, ಗದಾ, ಪದ್ಮಗಳು ಭಕ್ತರ ಪಾಪ, ಅವಿದ್ಯೆಗಳನ್ನು ಹೋಗಲಾಡಿಸಿ, ಸುವಿದ್ಯೆಗಳನ್ನು ಕೊಟ್ಟು ಆನಂದವನ್ನು ಉಂಟುಮಾಡುತ್ತವೆ. ಶ್ರೀಹರಿಯು ವನಮಾಲೆಯನ್ನು ಧರಿಸಿ, ಅದರ ಸುವಾಸನೆ ಮತ್ತು ಮಕರಂದಲೋಭದಿಂದ ಬಂದು ಗುಂಯ್‌ಗುಡುತ್ತಿರುವ ದುಂಬಿಗಳೆಂಬ ಶಿಷ್ಯರು ಅನೂಚ್ಚಾರಣೆ ಮಾಡುತ್ತಿರುವಾಗ ತಾನು ವೇದಗಳ ನಿರಂತರ ಉಚ್ಚಾರಣೆ ಮಾಡುತ್ತಿರುತ್ತಾನೆ. ಶ್ರೀಹರಿಯ ಮುಖಚಂದ್ರನು ಅದ್ಭುತನಾಗಿದ್ದಾನೆ. ಅವನ ಮಂದಹಾಸವು ವಂದಿಸಿದವರಿಗೆ ತನ್ನ ಅಪರೋಕ್ಷವನ್ನು ಕೊಡುತ್ತದೆ. ಅವನ ಮಂದಹಾಸದ ಕಿರಣಗಳು ಅಮೃತವನ್ನು ಸುರಿಸಿ ಸ್ನಾನವನ್ನು ಮಾಡಿಸುತ್ತವೆ. ಕಟಾಕ್ಷವು ಜನನಮರಣಗಳನ್ನು ದೂರೀಕರಿಸುತ್ತದೆ. ಕೃಷ್ಣಾತ್ಮಕವೇ ಆಗಿರುವ ಹರಿಯ ವಕ್ರಕೇಶಗಳು ಧ್ಯಾನಮಾಡಿದವರಿಗೆ ಪವಿತ್ರತೆಯನ್ನುಂಟುಮಾಡುತ್ತವೆ ಎಂದು ವಿಷ್ಣುವನ್ನು ಇಲ್ಲಿ ವರ್ಣಿಸಿದ್ದಾರೆ.

ಆಚಾರ್ಯರು ದ್ವಾದಶಸ್ತೋತ್ರದ ಮೊದಲನೆಯ ಅಧ್ಯಾಯದಲ್ಲಿ ನಮಾಮಿ ನಿಖಿಲಾಧೀಶಕಿರೀಟಾಘೃಷ್ಟಪೀಠವತ್' ಎಂದು ಆರಂಭಿಸಿ ಮಾಡಿರುವ ವರ್ಣನೆಯು ತ್ರಿವಿಕ್ರಮಪಂಡಿತಾಚಾರ್ಯರಿಗೆ ಈ ಸ್ತೋತ್ರವನ್ನು ಮಾಡಲು ಪ್ರೇರಣೆ ಉಂಟುಮಾಡಿರಬಹುದು. ಆದಿಯಿಂದ ಅಂತ್ಯದವರೆಗೆ 32ಶ್ಲೋಕಗಳೂ ಸ್ರಗ್ಧರಾವೃತ್ತದಿಂದ ರಚಿತವಾಗಿ ಬಹಳ ಗಂಭೀರ, ಧೀರವಾದ ಭಕ್ತಿಗಂಗೆಯನ್ನು ಪ್ರವಹಿಸುವಂತೆ ಮಾಡುತ್ತವೆ.

ಈ ಸ್ತುತಿಗ್ರಂಥಕ್ಕೆ ಎರಡು ವ್ಯಾಖ್ಯಾನಗಳು ಸಿಕ್ಕಿವೆ. ಅದರಲ್ಲಿ ರಾಮಾಚಾರ್ಯ ಎಂಬುವರು ಬರೆದಿರುವ ವ್ಯಾಖ್ಯಾನವು ಒಂದು ಬಾರಿ ಮುದ್ರಿತವಾಗಿದೆ. ವರದರಾಜಾಚಾರ್ಯರೆಂಬುವರು ಬರೆದಿರುವ ವ್ಯಾಖ್ಯಾನವು ಇದುವರೆಗೆ ಮುದ್ರಿತವಾದಂತೆ ಕಾಣುವುದಿಲ್ಲ. ಈ ವರದರಾಜಾಚಾರ್ಯರೆಂಬುವರು ಆದ್ಯಮನೆತನಕ್ಕೆ ಸೇರಿದವರು ಎಂದು ತೋರುತ್ತದೆ. ಈ ವ್ಯಾಖ್ಯಾನದಲ್ಲಿ ಇವರು ಬಹಳ ಸುಂದರವಾಗಿ, ಸರಳವಾಗಿ ಶ್ಲೋಕಗಳ ಅಭಿಪ್ರಾಯವನ್ನು ವಿಶದಪಡಿಸಿರುತ್ತಾರೆ. ಅಲ್ಲಲ್ಲಿ ವ್ಯಾಕರಣ ಸೂತ್ರಗಳನ್ನು ಉಲ್ಲೇಖಿಸುತ್ತಾರೆ. ಅನೇಕ ಸ್ಥಳಗಳಲ್ಲಿ ವ್ಯಾಕರಣಮಹಾಭಾಷ್ಯಸಮ್ಮತಿಯನ್ನೂ ಕೊಡುತ್ತಾರೆ. ಹೆಚ್ಚಾಗಿ ನಾನಾರ್ಥರತ್ನಮಾಲಾ ಕೋಶವನ್ನುದಾಹರಿಸುತ್ತಾರೆ. ತ್ರಿವಿಕ್ರಮಪಂಡಿತಾಚಾರ್ಯರ ಅಭಿಪ್ರಾಯವನ್ನು ಬಹಳ ಚೆನ್ನಾಗಿ ವಿಶದಪಡಿಸಿದ್ದಾರೆ.

ಬಾಲ್ಯದಲ್ಲಿ ವಿಷ್ಣುಸ್ತುತಿ, ನರಸಿಂಹಸ್ತುತಿ, ನಖಸ್ತುತಿ, ವಾಯುಸ್ತುತಿ, ಶಿವಸ್ತುತಿ ಎಂಬ ಐದು ಸ್ತುತಿಗಳನ್ನು ಹಿಂದೆ ಬಾಲಕರು ಕಂಠಪಾಠಮಾಡಿ ಅನಂತರ ಆ ಸ್ತುತಿಗಳ ಅರ್ಥಗಳನ್ನು ತಿಳಿದುಕೊಳ್ಳುತ್ತಿದ್ದರು. ಪವಮಾನ, ಪಂಚಸೂಕ್ತ (ಪುರುಷಸೂಕ್ತ, ಅಂಭ್ರಣೀಸೂಕ್ತ, ಶ್ರೀಸೂಕ್ತ, ಬಳಿತ್ಥಾಸೂಕ್ತ, ಮನ್ಯುಸೂಕ್ತ) ಮತ್ತು ಪಂಚಸ್ತುತಿಗಳನ್ನು ಕಲಿತರೆ ಒಂದನೇ ತರಗತಿಯನ್ನು ಮುಗಿಸಿದಂತಾಯಿತು ಎಂಬ ವಾಡಿಕೆಯ ಮಾತಿತ್ತು. ಇಂದು ಈ ಪರಿಪಾಟಿ ಲುಪ್ತವಾಗಿದೆ. ಆದರೂ ಅತ್ಯುತ್ತಮವಾದ ಈ ವಿಷ್ಣುಸ್ತುತಿಯ ವ್ಯಾಖ್ಯಾನವು ಲುಪ್ತವಾಗದಿರಲಿ ಎಂದೂ ನನಗೂ ಶ್ರೀಹರಿಯ ಸೇವೆಯಿಂದ ಸ್ವಲ್ಪವಾದರೂ ಪುಣ್ಯಬರಲೆಂದೂ ಈ ಸ್ತೋತ್ರದ ಸಾರ್ಥಕಪ್ರಕಾಶನಕ್ಕೆ ಕೈಹಾಕಿದ್ದೇನೆ. ಭಕ್ತಬಂಧುಗಳು ಈ ಪುಸ್ತಕವನ್ನು ಕೊಂಡು, ಓದಿ, ಓದಿಸಿ ಹರಿಭಕ್ತಿಯನ್ನು ಬೆಳೆಸಿಕೊಂಡು ಧನ್ಯರಾಗಬೇಕು.

ವ್ಯಾಖ್ಯಾನದ ಒಂದೇ ಪ್ರತಿಯು ಹರಿದಾಸರತ್ನಂ ಗೋಪಾಲದಾಸರ ಮೂಲಕ ಸಿಕ್ಕಿದೆ. ಈ ಸ್ತೋತ್ರದ ಅನುವಾದಕ್ಕೂ ಆ ವ್ಯಾಖ್ಯಾನವೇ ಪ್ರೇರಣೆ, ಉತ್ಸಾಹವನ್ನು ಕೊಟ್ಟಿದೆ. ಶ್ರೀಯುತರಿಗೆ ಅನಂತನಮಸ್ಕಾರಗಳು. ಈ ಗ್ರಂಥವನ್ನು ಸುಂದರವಾಗಿ ಸಕಾಲದಲ್ಲಿ ಮುದ್ರಿಸಿದ ಶ್ರೀವಿಜಯ ಪ್ರಿಂಟಿಂಗ್ ಹೌಸ್‌ನವರಿಗೂ ನಾನು ಆಭಾರಿ.

ಈ ಪ್ರಕಟನೆಯ ಕಾರ್ಯಕ್ಕೆ ಪ್ರತ್ಯಕ್ಷಪರೋಕ್ಷವಾಗಿ ನೆರವಾದ ಎಲ್ಲರಿಗೂ ನಾನು ಕೃತಜ್ಞ. ದಿ || ಸಿ.ಆರ್. ನಾರಾಯಣರಾಯರ ಮಕ್ಕಳು ಶ್ರೀ ಸಿ.ಎನ್. ರಾಘವೇಂದ್ರ-ರಾಯರು ಮತ್ತು ಅವರ ಸಹೋದರ ಶ್ರೀ ಸಿ.ಎನ್. ರಾಮಚಂದ್ರರಾಯರು ಇದಕ್ಕೆ ಸಹಾಯ ನೀಡಿದ್ದಾರೆ. ಅವರಿಗೆ ಹರಿವಾಯುಗಳು ಐಹಿಕ ಆಮುಷ್ಮಿಕ ಇಷ್ಟಾರ್ಥಗಳನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ.

ದುರ್ಮತಿ ಪುಷ್ಯಶುದ್ಧ ಮುಕ್ಕೋಟಿ ದ್ವಾದಶೀ,
ಕಲಿವರ್ಷ 5082 ; ಬೆಂಗಳೂರು.
7-1-1982

ಇತಿ ವೈಷ್ಣವ ಪಾದಪದ್ಮದಾಸ,
ಆಚಾರ್ಯ ಸಾಣೂರು
ಭೀಮಭಟ್ಟ.

## ದ್ವಿತೀಯಮುದ್ರಣ

ವಿಷ್ಣುಸ್ತುತಿಯ ಅನುವಾದದ ಪುಸ್ತಕದ ಪ್ರಥಮಮುದ್ರಣ 1982ರಲ್ಲಿ ಆಗಿದ್ದು ಬಹಳ ಸಮಯದಿಂದ ಪ್ರತಿಗಳು ಲಭ್ಯವಿರಲಿಲ್ಲ. ಈಗ ಪುನರ್ಮುದ್ರಣ ಮಾಡಿ ಪ್ರಕಾಶಿಸುತ್ತಿದ್ದೇವೆ. ಈ ದ್ವಿತೀಯಮುದ್ರಣದ ಅಕ್ಷರಸಂಯೋಜನೆಯನ್ನು ಮಾಡಿಕೊಟ್ಟ ಶ್ರೀ.ಕೆ.ಸುಬ್ಬಣ್ಣ ಹಾಗೂ ಮುದ್ರಣಮಾಡಿಕೊಟ್ಟಿರುವ ಶ್ರೀರಂಗಮುದ್ರಣಾಲಯದವರಿಗೂ ಪ್ರಕಾಶನವು ಆಭಾರಿಯಾಗಿರುತ್ತದೆ. ಈ ರೀತಿಯ ಜ್ಞಾನಕಾರ್ಯದಲ್ಲಿ ತೊಡಗಿಸಿ-ಕೊಂಡಾಗ ನಮಗೂ ಸ್ವಲ್ಪ ಪರಮಾತ್ಮನ ಮಾಹಾತ್ಮ್ಯಜ್ಞಾನಪೂರ್ವಕವಾದ ಭಕ್ತಿಯು ಬರುವುದೆಂದು ಈ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದೇವೆ. ವಿಷ್ಣುಭಕ್ತರು ನಮ್ಮ ಪ್ರಯತ್ನವನ್ನು ಪ್ರೋತ್ಸಾಹಿಸುವಿರೆಂದು ಆಶಿಸುತ್ತೇವೆ.

ಪ್ರಸಂಗಾಭರಣತೀರ್ಥಪ್ರಕಾಶನ

ಶ್ರೀವಾದಿರಾಜಗುರ್ವಂತರ್ಗತಶ್ರೀಮದ್ವೇತಾಯನಮಃ

# ಶ್ರೀವಿಷ್ಣುಸ್ತುತಿಃ

## ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯವಿರಚಿತಾ ಸಂಸ್ಕೃತ ಟೀಕಾ–ಕರ್ನಾಟಕಭಾಷಾನುವಾದಾದಿಸಹಿತಾ

**ವಿಷ್ಣೋರಸ್ಮಾನ್ ಪದಾಬ್ಜೇ ಕೃತನಿವಸತಯಃ ಪಾಂಸವಃ ಪಾವಯಂತು**
**ಶ್ರೀಮಂತಃ ಶ್ರೀಕಬರ್ಯಾಂ ಕುಸುಮಸುನಿಚಯೇ ಪೂರಯಂತಃ ಪರಾಗಾನ್ ।**
**ಲಾಲಾಟ್ಯಾಂ ಲೇಖಿಕಾಯಾಮಜನಿಪವನಯೋರಕ್ಷತಾನ್ನಿಕ್ಷಿಪಂತಃ**
**ಪೌನಃಪುನ್ಯೇನ ಶುದ್ಧಿಂ ಹರಶಿರಸಿ ನತೇ ಜಾಹ್ನವೀಂ ಜೋಷಯಂತಃ ॥೧॥**

॥ ಶ್ರೀವೇದವ್ಯಾಸಾಯ ನಮಃ ॥

**ಶ್ರೀಗುರುಭ್ಯೋನಮಃ**

ಶ್ರೀವಿಷ್ಣುಂ ಶಿರಸಾ ಪ್ರಣಮ್ಯ ತರಸಾ ಭಕ್ತೇಷ್ಟದಂ ಶ್ರೀಪತಿಂ
ಶ್ರೀಮನ್ಮಧ್ವಮುನಿಂ ಚ ಶುದ್ಧಧಿಷಣಾಸಂಧಾಯಿಶಾಸ್ತ್ರಾಕರಮ್ ।
ಶ್ರೀಮಂತಂ ಜಯತೀರ್ಥವರ್ಯಮಪಿ ಮೇ ಸಾಕ್ಷಾದ್ಗುರೂನ್ ಸದ್ಧಿಯಃ
ಕುರ್ವೇಽಹಂ ಕರುಣಾಬಲಾದ್ಗುರುತತೇರ್ವಿಷ್ಣುಸ್ತುತೇಃ ಪಂಚಿಕಾಮ್ ॥೧॥
ಟೀಕಾಸ್ತಿ ಯದ್ಯಪ್ಯಮಲಾ ಪುರಾತನೀ ತಥಾಪಿ ಸಮ್ಯಗ್ ನ ತಯಾ ಪರಿಗ್ರಹಃ ।
ಅಲ್ಪಶ್ರುತಾನಾಂ ಭವತೀತ್ಯಭೀಪ್ಸತಾಂ ಕರೋಮಿ ಟೀಕಾಂ ಸಕಲೋಪಕಾರಿಕಾಮ್ ॥

ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯಾಃ ವಿಷ್ಣುಸ್ತುತಿಂ ಕರ್ತುಕಾಮಾಃ ಸ್ವಚಿಕೀರ್ಷಿತಸ್ಯ ಗ್ರಂಥಸ್ಯ ನಿರ್ವಿಘ್ನಪರಿಸಮಾಪ್ತ್ಯರ್ಥಂ ಶಿಷ್ಟಾಚಾರಪರಂಪರಾಪ್ರಾಪ್ತಂ 'ಇಷ್ಟದೇವತಾಪಾಂಸುಭಿಃ ಶುದ್ಧಿಪ್ರಾರ್ಥನಾರೂಪಂ' ಮಂಗಲಂ ಕೃತ್ವಾ ಶಿಷ್ಯಶಿಕ್ಷಾರ್ಥಂ ಗ್ರಂಥಾದೌ ನಿಬಧ್ನಂತಿ — **ವಿಷ್ಣೋರಿತ್ಯಾದಿನಾ ॥** ವಿಷ್ಣೋಃ ಭಗವತಃ ಪದಾಬ್ಜೇ ಪಾದಕಮಲೇ ಕೃತಾ ನಿವಸತಿಃ ನಿವಾಸೋ ಯೈಃ ತೇ ಕೃತನಿವಸತಯಃ, ಪಾಂಸವಃ ರೇಣವಃ, ಅಸ್ಮಾನ್ ಪಾವಯಂತು ಶೋಧಯಂತು ಇತ್ಯನ್ವಯಃ ॥ ಕೀದೃಗ್ಭೂತಾಃ

ಪಾಂಸವಃ ಶ್ರೀಮಂತಃ ಕಾಂತಿಮಂತಃ ಶೋಭಾವಂತಃ ಇತಿಯಾವತ್, ಶ್ರೀಕಬರ್ಯಾಂ ಶ್ರಿಯಃ ಲಕ್ಷ್ಮ್ಯಾಃ ಕಬರ್ಯಾಂ ಕೇಶಪಾಶೇ ಸ್ಥಿತೇ ಇತಿಶೇಷಃ, ಭೂಷಾಯಿತೇ ಕುಸುಮಸುನಿಚಯೇ ಕುಸುಮಾನಾಂ ಪುಷ್ಪಾಣಾಂ ಸುನಿಚಯೇ ಶೋಭನ-ಸಮುದಾಯೇ ಸುಂದರನಿಕರೇ ಇತಿ ಯಾವತ್ । ಸ್ವಸಂಬಂಧೇನ ಇತ್ಯರ್ಥಾಲ್ಲಭ್ಯತೇ । ಪರಾಗಾನ್ ಪುಷ್ಪರೇಣೂನ್ ಪೂರಯಂತಃ ಪೂರ್ಣಾನ್ ಕುರ್ವಂತಃ ಇವ ಸ್ಥಿತಾಃ । ಗಮ್ಯಮಾನಾರ್ಥತ್ವಾತ್ ಇವಶಬ್ದಸ್ಯ ಅಪ್ರಯೋಗಃ।

ವಿಷ್ಣುಪಾದಾಬ್ಜವಂದನಸಮಯೇ ಶ್ರೀದೇವ್ಯಾಃ ಕಬರೀಸ್ಥಿತಪುಷ್ಪಸಮು-ದಾಯೇ ತತ್ಕಬರ್ಯಾಂ ನಿಪತಿತಾಃ ವಿಷ್ಣುಪಾದಪಾಂಸವಃ ಪುಷ್ಪಪರಾಗವತ್ ಅವ-ಭಾಸಂತೇ ಇತಿ ಭಾವಃ । ಅಥವಾ ದೇವ್ಯಾಂ ಹರಿಚರಣನಲಿನವಂದನಪರಾಯಾಂ ಸತ್ಯಾಂ ತಸ್ಯಾಃ ಕೇಶಪಾಶಸ್ಥಿತಕುಸುಮಸಮೂಹೇ ಪೂರ್ವಮೇವ ವಿಲಸತಃ ಪರಾಗಾನ್ ವಿಷ್ಣೋಃ ಪಾದಪಾಂಸವಃ ಆತ್ಮಪ್ರವೇಶನೇನ ದ್ವಿಗುಣೀಕುರ್ವಂತಿ ಇತ್ಯರ್ಥಃ।

ಅಜನಿಪವನಯೋಃ, ಆತ್ ಪರಮಾತ್ಮನಃ ಸಕಾಶಾತ್ ಜನಿರ್ಯಸ್ಯಾಸೌ ಅಜನಿಃ ಬ್ರಹ್ಮಾ । ಪ್ರಲಯೇಽಪ್ಯವಿಲುಪ್ತಜ್ಞಾನತ್ವೇನ ತದ್‌ಜ್ಞಾನಪ್ರವಾಹಸ್ಯ ಸರ್ವದಾ ವಿದ್ಯಮಾನತ್ವೇನ ಉತ್ಪತ್ತ್ಯಭಾವಾದ್ವಾ ಅಜನಿಃ, ಬ್ರಹ್ಮಾ, ಪವನಃ ಮುಖ್ಯಪ್ರಾಣಃ ತಯೋಃ, ಲಾಲಾಟ್ಯಾಂ ಲಲಾಟಸಂಬಂಧಿನ್ಯಾಂ ಲೇಖಿಕಾಯಾಂ ಊರ್ಧ್ವಪುಂಡ್ರ-ರೂಪಾಯಾಂ ರೇಖಾಯಾಂ ಸ್ವಸಂಬಂಧೇನೇತಿ ಶೇಷಃ । ಅಕ್ಷತಾನ್ ನಿಕ್ಷಿಪಂತಃ ನಿದಧತಃ ಇವ ಸ್ಥಿತಾಃ, ತತ್ರ ಅಕ್ಷತವದಾಚರಂತಿ ಇತಿ, ಶ್ರೀವಿಷ್ಣುಪಾದಾಬ್ಜವಂದನಸಮಯೇ ಬ್ರಹ್ಮವಾಯ್ವೋಃ ಲಲಾಟಸ್ಥೋರ್ಧ್ವಪುಂಡ್ರೇ ನಿಪತಿತಾಃ ಶ್ರೀವಿಷ್ಣುಪಾದಪಾಂಸವಃ ಅಕ್ಷತಾ ಇವ ಅವಭಾಸಂತೇ, ಇತಿ ಭಾವಃ । ನತೇ ನಮ್ರೇ ಹರಶಿರಸಿ ಮಹಾದೇವಶಿರಸಿ, ಸ್ವಸಂಬಂಧೇನೇತಿ ಪೂರ್ವವದ್ ಅರ್ಥಾಲ್ಲಭ್ಯತೇ, ಸ್ಥಿತಾಂ ಇತಿ ಶೇಷಃ । ಜಾಹ್ನವೀಂ ಭಾಗೀರಥೀಂ ಗಂಗಾಮಪಿ, ಪೌನಃಪುನ್ಯೇನ ಪುನಃಪುನಃ ಕ್ರಿಯಾಸಮಭಿವ್ಯಾಹಾರೇಣ, ಶುದ್ಧಿಂ ಪವಿತ್ರತಾಂ ಜೋಷಯಂತಃ ಪ್ರಾಪಯಂತಃ ಇತಿಯಾವತ್ ।

ಶ್ರೀವಿಷ್ಣುಪಾದಾಬ್ಜವಂದನಸಮಯೇ ಹರಶಿರಸಿ ಸ್ಥಿತಾ ಭಾಗೀರಥೀ ತತ್ಪಾದ-ಪಾಂಸುಭಿಃ ಪವಿತ್ರಾ ಭವತಿ ಇತಿ ಭಾವಃ। ಅನೇನ ಜಗತ್‌ಪವಿತ್ರೀಕರಣಸಮರ್ಥಾಯಾಃ ಭಾಗೀರಥ್ಯಾಃ ಅಪಿ ಪಾವಿತ್ರ್ಯಕರಣಸಾಮರ್ಥ್ಯಸೂಚನೇನ ವಿಷ್ಣುಪಾದಪಾಂಸೂನಾಂ

ಸರ್ವಾಪೇಕ್ಷಯಾ ಅಧಿಕಂ ಪಾವಿತ್ರ್ಯಂ ಸೂಚಿತಮ್ । ಏತಾದೃಶಾಃ ಪಾಂಸವಃ ನಃ ಅಸ್ಮಾನ್ ಪಾವಯಂತು ಸ್ವಸಂಬಂಧೇನ ಪವಿತ್ರಾನ್ ಕಾರಯಂತು । ಅನೇನ ಲಕ್ಷ್ಮ್ಯಾಃ ಸರ್ವದೇವೋತ್ತಮತ್ವೇನ ವಿಷ್ಣೋಶ್ಚ ತದ್ ವಂದ್ಯತ್ವಕಥನೇನ, ವಿಷ್ಣೋಃ ಸರ್ವದೇವೋತ್ತಮತ್ವಂ ಉಕ್ತಂ ಭವತಿ । ತತ್ರ ಪ್ರಮಾಣಂ ತು 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ । ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ ॥' ಇತಿ ಲಕ್ಷ್ಮ್ಯಾಃ ಸ್ವಸ್ಯ ಬ್ರಹ್ಮಾದ್ಯುತ್ತಮತ್ವಮುಕ್ತ್ವಾ, 'ಮಮಯೋನಿರಪ್ಸ್ವಂತಸ್ಸಮುದ್ರೇ' ಇತಿ ಸ್ವಸ್ಯ ಕಾರಣಸ್ಯ ಸಮುದ್ರಶಾಯಿನಃ ಪ್ರತಿಪಾದನಂ; ಏವಂ 'ಹಿತ್ವೇತರಾನ್ ಪ್ರಾರ್ಥಯತೋ ವಿಭೂತಿರ್ಯಸ್ಯಾಂಘ್ರಿರೇಣುಂ ಜುಷತೋಽನಭೀಪ್ಸೋಃ ॥' (ಭಾ. ಸ್ಕಂ. ೮) 'ಅಥಾಪಿ ಯತ್ಪಾದನಖಾವಸೃಷ್ಟಂ ಜಗದ್ವಿರಿಂಚೋಪಹೃತಾರ್ಹಣಾಂಭಃ । ಸೇಶಂ ಪುನಾತ್ಯನ್ಯ-ತಮೋ ಮುಕುಂದಾತ್ ಕೋ ನಾಮ ಲೋಕೇ ಭಗವತ್ಪದಾರ್ಥಃ ॥' ಇತಿ ಭಾಗವತ ವಾಕ್ಯಂ ಚ । ಅನ್ಯಾನಿ ಪ್ರಮಾಣಾನಿ ಸುಧಾದೌ ಉದಾಹೃತಾನಿ ದ್ರಷ್ಟವ್ಯಾನಿ । 'ಕಬರೀಕೇಶಪಾಶಶ್ಚ ಧಮ್ಮಿಲ್ಲಃ ಸಂಯತಾಃ ಕಚಾಃ' ಇತ್ಯಮರಃ । 'ಸ್ತ್ರಿಯಃ ಸುಮನಸಃ ಪುಷ್ಪಂ ಪ್ರಸೂನಂ ಕುಸುಮಂ ಸುಮಂ, ಪರಾಗ ಸುಮನೋರಜಃ ಇತಿ ಚ । ಲೇಖಿಕಾಯಾಮಿತ್ಯತ್ರ ಲೇಖಾಶಬ್ದಾತ್ ಸ್ವಾರ್ಥೇ ಕಪ್ರತ್ಯಯೇ 'ಕೇಽಣಃ' (೭-೪-೧೩) ಇತಿ ಹ್ರಸ್ವೇ 'ಪ್ರತ್ಯಯಸ್ಥಾತ್ ಕಾತ್ ಪೂರ್ವಸ್ಯಾತ ಇದಾಪ್ಯಸುಪಃ'(೭-೩-೪೪) ಇತಿ ಇತ್ವಮಿತಿ ದ್ರಷ್ಟವ್ಯಮ್ । ಪಾವಯಂತು ಇತಿ ಪೂಞ್ ಪವನೇ ಇತ್ಯಸ್ಮಾದ್ಧಾತೋಃ ಹೇತುಮಣ್ಣಿಜಂತಾತ್ ಕರ್ತರಿ ಲೋಟ್ ಪರಸ್ಮೈಪದಮ್ । ಶಬ್ದಾಲಂಕಾರಸ್ತು ಛೇಕಾನುಪ್ರಾಸಃ । ವರ್ಣಸಾಮ್ಯನುಪ್ರಾಸಃ ಛೇಕವೃತ್ತಿಗತೋ ದ್ವಿಧಾ । ಸೋಽನೇಕಸ್ಯ ಸಕೃತ್ ಪೂರ್ವಃ ಏಕಸ್ಯಾಪ್ಯಸಕೃತ್ ಪರಃ – (ಕಾವ್ಯಪ್ರಕಾಶಃ ನವಮೋಲ್ಲಾಸಃ ಕಾರಿಕಾ ೭೯) ಇತಿಲಕ್ಷಣಾತ್ । ಅರ್ಥಾಲಂಕಾರಸ್ತು, ಪೂರಯಂತಃ ಪರಾಗಾನ್, ಅಕ್ಷತಾನ್ ನಿಕ್ಷಿಪಂತಃ ಇತ್ಯತ್ರ ಪೂರಯಂತ ಇವ ನಿಕ್ಷಿಪಂತ ಇವ ಇತ್ಯುಪಮಾಯಾಃ ಗಮ್ಯಮಾನತ್ವಾತ್ ಲುಪ್ತೋಪಮಾ । ಸಾಧರ್ಮ್ಯಮುಪಮಾ ಭೇದೇ । ಪೂರ್ಣಾ ಲುಪ್ತಾ ಚ ಸಾಗ್ರಿಮಾ ಕಾ.ಪ್ರ.ದ ಉ.ಕಾ.೭೮ ಇತ್ಯುಕ್ತೇಃ । ಏತತ್ ಸ್ತುತಿಸಮಾಪ್ತಿಪರ್ಯಂತಂ ಸ್ರಗ್ಧರಾವೃತ್ತಮ್ । 'ಮ್ರಭ್ನೈರ್ಯಾನಾಂ ತ್ರಯೇಣ ತ್ರಿಮುನಿಯತಿಯುತಾ ಸ್ರಗ್ಧರಾ ಕೀರ್ತಿತೇಯಂ' ಇತಿ ತಲ್ಲಕ್ಷಣಮ್ । ಅತ್ರಾದೌ ಭೂದೇವತಾಕ ಮಗಣಪ್ರಯೋಗಾತ್ ಏತತ್ ಸ್ತೋತ್ರಸ್ಯ ಲಕ್ಷ್ಮೀಕರತ್ವಂ ಸೂಚಯತಿ । 'ಮೋ ಭೂಮಿಸ್ತ್ರಿಗುರುಃ ಶ್ರಿಯಂ ವಿತನುತೇ' ಇತ್ಯುಕ್ತೇಃ ॥೧॥

**ಅನ್ವಯ—** ಶ್ರೀಕಬರ್ಯಾಂ (ಸ್ಥಿತೇ) ಕುಸುಮಸುನಿಚಯೇ ಪರಾಗಾನ್ ಪೂರಯಂತಃ, ಅಜನಿಪವನಯೋಃ ಲಾಲಾಟ್ಯಾಂ ಲೇಖಿಕಾಯಾಂ ಅಕ್ಷತಾನ್ ನಿಕ್ಷಿಪಂತಃ, ನತೇ ಹರಶಿರಸಿ (ಸ್ಥಿತಾಂ) ಜಾಹ್ನವೀಂ ಪೌನಃಪುನ್ಯೇನ ಶುದ್ಧಿಂ ಜೋಷಯಂತಃ, ವಿಷ್ಣೋಃ ಪದಾಬ್ಜೇ ಕೃತನಿವಸತಯಃ ಶ್ರೀಮಂತಃ ಪಾಂಸವಃ ಅಸ್ಮಾನ್ ಪಾವಯಂತು ॥

**ಅನ್ವಯಾರ್ಥ—** ಶ್ರೀಕಬರ್ಯಾಂ = ಲಕ್ಷ್ಮೀದೇವಿಯ ಕೇಶಪಾಶದಲ್ಲಿ (ಜಡೆಯಲ್ಲಿ) (ಸ್ಥಿತೇ = ಇರುವ), ಕುಸುಮಸುನಿಚಯೇ = ಹೂವುಗಳ ಸುಂದರವಾದ ರಾಶಿಯಲ್ಲಿ, ಪರಾಗಾನ್ = ಪುಷ್ಪರೇಣುಗಳನ್ನು, ಪೂರಯಂತಃ = ತುಂಬಿಸುತ್ತಿರುವ, ಅಜನಿಪವನಯೋಃ = ಚತುರ್ಮುಖ ಮತ್ತು ಮುಖ್ಯಪ್ರಾಣರ, ಲಾಲಾಟ್ಯಾಂ = ಹಣೆ-ಯಲ್ಲಿರುವ, ಲೇಖಿಕಾಯಾಂ = ಊರ್ಧ್ವಪುಂಡ್ರರೇಖೆಯಲ್ಲಿ, ಅಕ್ಷತಾನ್ = ಮಂತ್ರಾಕ್ಷತೆಗಳನ್ನು, ನಿಕ್ಷಿಪಂತಃ = ಇಡುತ್ತಿರುವ, ನತೇ = ಬಾಗಿದ, ಹರಶಿರಸಿ = ಈಶ್ವರನ ಶಿರಸ್ಸಿನಲ್ಲಿ, (ಸ್ಥಿತಾಂ = ಇರುವ), ಜಾಹ್ನವೀಂ = ಗಂಗೆಯನ್ನು (ಕುರಿತು), ಪೌನಃ-ಪುನ್ಯೇನ = ಅನೇಕ ಬಾರಿ, ಶುದ್ಧಿಂ = ಪವಿತ್ರತೆಯನ್ನು, ಜೋಷಯಂತಃ = ಹೊಂದಿಸು-ತ್ತಿರುವ, ವಿಷ್ಣೋಃ = ಶ್ರೀಮನ್ನಾರಾಯಣನ, ಪದಾಬ್ಜೇ = ಪಾದಕಮಲದಲ್ಲಿ, ಕೃತ-ನಿವಸತಯಃ = ಮಾಡಲ್ಪಟ್ಟ ವಾಸವುಳ್ಳ, ಶ್ರೀಮಂತಃ = ಕಾಂತಿಪೂರ್ಣವಾದ, ಪಾಂಸವಃ = ಧೂಳಿಗಳು, ಅಸ್ಮಾನ್ = ನಮ್ಮನ್ನು, ಪಾವಯಂತು = ಪವಿತ್ರರನ್ನಾಗಿ ಮಾಡಲಿ.

**ತಾತ್ಪರ್ಯ—** ಶ್ರೀಮತ್ತ್ರಿವಿಕ್ರಮಪಂಡಿತಾಚಾರ್ಯರು ವಿಷ್ಣುಸ್ತುತಿಯನ್ನು ಮಾಡುವ ಅಪೇಕ್ಷೆ ಉಳ್ಳವರಾಗಿ ತಾನು ಮಾಡಲು ಬಯಸಿರುವ ಗ್ರಂಥದ ನಿರ್ವಿಘ್ನಪರಿ-ಸಮಾಪ್ತಿಗೋಸ್ಕರ, ಶಿಷ್ಟಾಚಾರಪರಂಪರಾಪ್ರಾಪ್ತವಾದ 'ಇಷ್ಟದೇವತೆಯ ಪಾದಧೂಳಿ-ಗಳಿಂದ ಪವಿತ್ರತೆಯ ಪ್ರಾರ್ಥನಾ' ರೂಪವಾದ ಮಂಗಳವನ್ನು ಮಾಡಿ ಅದನ್ನು ಗ್ರಂಥದ ಆದಿಯಲ್ಲಿ ಬರೆಯುತ್ತಿದ್ದಾರೆ. ಇಲ್ಲಿ ಪರಮಾತ್ಮನ ಪಾದಾದಿ ಕೇಶಪರ್ಯಂತವಾಗಿ ಎಲ್ಲಾ ಅವಯವಗಳನ್ನು ವರ್ಣಿಸಲು ಹೊರಟಿರುವ ಅವರು ಮೊದಲನೆಯ ಪದ್ಯದಿಂದ ಪಾದಧೂಳಿಗಳನ್ನು ವರ್ಣಿಸಿರುವುದರಿಂದ ಈ ಪದ್ಯವೂ ಕೂಡ ವಿಷ್ಣುಸ್ತುತಿರೂಪವೇ ಆಗಿದೆಯೆಂದು ತಿಳಿಯಬೇಕು. ಲಕ್ಷ್ಮೀದೇವಿಯು ಶ್ರೀಹರಿಯ ಪಾದಕಮಲದಲ್ಲಿ ಬಾಗಿ

ಪಾದದ ಕೆಳಭಾಗದಲ್ಲಿ ತಲೆಸೋಕಿಸಿ ನಮಸ್ಕರಿಸುತ್ತಾಳೆ. ಆಗ ಅವಳು ಜಡೆಯಲ್ಲಿ ಮುಡಿದ ಹೂಗಳಲ್ಲಿ ಪರಮಾತ್ಮನ ಪಾದಧೂಳಿಗಳು ತುಂಬಿಕೊಳ್ಳುತ್ತವೆ. ಹೂವಿನ ರಾಶಿಯಲ್ಲಿ ಮೊದಲೇ ಇರುವ ಪರಾಗಗಳು ಇಮ್ಮಡಿಯಾಗುತ್ತವೆ. ಲಕ್ಷ್ಮೀದೇವಿಯ ಜಡೆಯ ಹೂವುಗಳಲ್ಲಿ ಬಿದ್ದ ಪರಮಾತ್ಮನ ಪಾದಧೂಳಿಗಳು ಹೂವಿನ ಪರಾಗಗಳಂತೆಯೂ ಶೋಭಿಸುತ್ತವೆ. ಚತುರ್ಮುಖಬ್ರಹ್ಮ ಮತ್ತು ಮುಖ್ಯಪ್ರಾಣರು ಶ್ರೀಹರಿಯ ಪಾದಪದ್ಮಗಳಿಗೆ ಬಾಗಿ ನಮಸ್ಕರಿಸುವಾಗ ಅವರ ಹಣೆಯಲ್ಲಿರುವ ಊರ್ಧ್ವಪುಂಡ್ರರೇಖೆಯಲ್ಲಿ ಬಿದ್ದ ಪರಮಾತ್ಮನ ಪಾದಧೂಳಿಗಳು ಅಕ್ಷತೆಯಂತೆ ಕಾಣಿಸುತ್ತವೆ. ಪರಮೇಶ್ವರನು ಪರಮಾತ್ಮನ ಪಾದಕಮಲಗಳಿಗೆ ಬಾಗಿ ನಮಸ್ಕರಿಸುವಾಗ, ಪರಮೇಶ್ವರನ ತಲೆಯಲ್ಲಿರುವ ಗಂಗೆಯಲ್ಲಿ ಬಿದ್ದ ಪರಮಾತ್ಮನ ಧೂಳಿಗಳು ಗಂಗೆಯನ್ನು ಮತ್ತಷ್ಟು ಪವಿತ್ರಳನ್ನಾಗಿ ಮಾಡುತ್ತವೆ. ಶ್ರೀಮನ್ನಾರಾಯಣನ ಪಾದಗಳಲ್ಲಿರುವ ಇಂತಹ ಧೂಳುಗಳು ನಮ್ಮನ್ನು ಪವಿತ್ರರನ್ನಾಗಿ ಮಾಡಲಿ ಎಂದು ತಾತ್ಪರ್ಯ.

**ವಿಶೇಷಾಂಶ** — ಲಕ್ಷ್ಮೀ,ಬ್ರಹ್ಮ, ಮುಖ್ಯಪ್ರಾಣ, ರುದ್ರಾದಿಗಳೂ ವಿಷ್ಣುವಿನಲ್ಲಿ ಪರಮಭಕ್ತಿಯನ್ನು ಮಾಡುತ್ತಾರೆ. ಪರಮಾತ್ಮನ ಪಾದದಾಸ್ಯವನ್ನು ಶಿರಸಾವಹಿಸುತ್ತಾರೆ. 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ' ಎಂಬ ಶ್ರುತಿಯಿಂದ ತಾನು ಸರ್ವ-ಸಾಮರ್ಥ್ಯಗಳಿಂದ ಕೂಡಿದವಳೆಂದು ಹೇಳುವ ಲಕ್ಷ್ಮಿಯೂ ಕೂಡ – 'ಮಮ ಯೋನಿರಪ್ಸು ಅಂತಃ ಸಮುದ್ರೇ' ಎಂದು ತನಗೆ ಕಾರಣನಾದವನು ಸಮುದ್ರಶಯನನಾದ ವಿಷ್ಣುವು ಎಂದು ಹೇಳಿರುವುದರಿಂದ ಮತ್ತು 'ಹಿತ್ವೇತರಾನ್ ಪ್ರಾರ್ಥಯತೋ ವಿಭೂತಿಃ, ಅಥಾಪಿ ಯತ್ಪಾದನಖಾವಸೃಷ್ಟಂ' ಇತ್ಯಾದಿ ಭಾಗವತಪ್ರಮಾಣಗಳಿಂದಲೂ ಲಕ್ಷ್ಮ್ಯಾದಿಗಳು ಭಗವಂತನ ದಾಸರು ಎಂದು ತಿಳಿದು ಬರುತ್ತದೆ. ಹೀಗೆ ಶ್ರೀಮನ್ನಾರಾಯಣನು ಸಮಾಧಿಕ-ರಹಿತನು, ಸರ್ವೈಶ್ವರ್ಯ, ಸರ್ವಸ್ವಾತಂತ್ರ್ಯ ಮುಂತಾದ ಮಹಾಮಹಿಮೆಗಳು ಶ್ರೀಹರಿಗೊಬ್ಬನಿಗೇ ಹೊರತು ಮತ್ತಾರಿಗೂ ಇಲ್ಲವೆಂದೂ ಸೂಚಿತವಾಗುತ್ತದೆ.

**ಕೀದೃಕ್ಶ್ಯಸ್ತೇಷು ವಾಚಃ ಕ್ವ ಚ ಕಥಮಥವಾ ಕಸ್ಯ ವಾಧಿಕ್ರಿಯೇರನ್**
**ಅಬ್ಧೌ ಸ್ರೋತಸ್ತರಂಗಾ ಇವ ಚ ಗುರುಗಿರೋ ಯದ್ಗುಣೌಘೇ ಸ್ಖಲಂತಿ ।**
**ದದ್ಯುಃ ಖದ್ಯೋತಪೋತಾ ದ್ಯುತಿಮತಿತನವಸ್ತತ್ರ ಕಿಂ ಯತ್ರ ರಾಜಾ**
**ಮಧ್ಯಾಹ್ನಾರ್ಕೇ ಸಮಗ್ರೋ ಗ್ಲಪಿತ ಇವಕೃತೋ ನಿಗ್ರಹಶ್ಚ ಗ್ರಹಾಣಾಮ್ ॥೨॥**

**ವ್ಯಾಖ್ಯಾನ—** ಇದಾನೀಂ ಅಸ್ಮಾಕಂ ನ ತತ್ಸ್ತವನಾಧಿಕಾರ ಇತಿ ಸ್ವಗರ್ವಂ ಪರಿಹರತಿ **ಕೀದೃಶ್ಯ ಇತಿ ॥** ಯದ್ಗುಣೌಘೇ ಯಸ್ಯ ಶ್ರೀವಿಷ್ಣೋಃ ಗುಣಾನಾಂ ಓಘೇ ಸಮೂಹೇ ಗುರುಗಿರಃ ಚ, ಗುರೂಣಾಂ ಬ್ರಹ್ಮಾದೀನಾಂ ಗಿರಶ್ಚ ವಾಕ್ಯಾನ್ಯಪಿ, ಅಬ್ಧೌ ಸಮುದ್ರೇ ಸ್ರೋತಸ್ತರಂಗಾ ಇವ, ಸ್ರೋತಸಾಂ ವೇಗವನ್ನದ್ಯಂಬೂನಾಂ, ಯದ್ಯಪಿ 'ಸ್ರೋತೋ-ಽಂಬುವೇಗೇಂದ್ರಿಯಯೋಃ' ಇತಿ ವಿಶ್ವಾಭಿಧಾನಾತ್ ಸ್ರೋತಶ್ಶಬ್ದೋಽಂಬುವೇಗ-ವಾಚಕಃ, ತಥಾಪ್ಯತ್ರ ಯೋಗ್ಯತಯಾ ಧರ್ಮಿಪ್ರಾಧಾನ್ಯವಿವಕ್ಷಯಾ ವೇಗವದಂಬೂನಿ ಗೃಹ್ಯಂತೇ, ತರಂಗಾ ಇವ ಊರ್ಮಯ ಇವ ಸ್ಖಲಂತಿ ಪ್ರತಿಹತಾ ಭವಂತಿ, ಯಥಾತರಂಗಾಣಾಂ, ಸಮುದ್ರವ್ಯಾಪನೇ ಶಕ್ತಿರ್ನಾಸ್ತಿ ತಥಾ ಬ್ರಹ್ಮಾದಿವಾಕ್ಯಾನಾಂ ಸಾಮಸ್ತ್ಯೇನ ತದ್ಗುಣವಿಷಯೀಕರಣೇ ಶಕ್ತಿರ್ನಾಸ್ತೀತಿ ಭಾವಃ । ತೇಷು ವಿಷಯ-ಸಪ್ತಮೀಯಂ, ಪ್ರಶಸ್ತೇಷು ಶ್ರೀವಿಷ್ಣೋಃ ಪಾದಪಾಂಸುಷು ವಿಷಯೇ ಕಸ್ಯ ವಾ ಅಸ್ಮದಾದೇಃ ಕೀದೃಶ್ಯ ವಾಚಃ ಕೇನ ಪ್ರಕಾರೇಣ ಯುಕ್ತಾನಿ ವಾಕ್ಯಾನಿ, ಅಥ ಕಥಂ ವಾ ಕೇನ ಪ್ರಕಾರೇಣ ವಾ ಅಧಿಕ್ರಿಯೇರನ್ ಅಧಿಕೃತಾ ಭವೇಯುಃ । ಕ್ವಾಪಿ ಕಥಮಪಿ ಕಸ್ಯಾಪಿ ಅಸ್ಮದಾದೇಃ ಕೇನಾಪಿ ಪ್ರಕಾರೇಣ ಯುಕ್ತಾನಿ ವಾಕ್ಯಾನಿ ಶ್ರೀವಿಷ್ಣುಪಾದ-ಪಾಂಸುವಿಷಯೀಕರಣೇ ನಾಧಿಕಾರಯಂತಿ ಇತ್ಯರ್ಥಃ । ಉಕ್ತಮರ್ಥಂ ಅರ್ಥಾಂತರ-ನ್ಯಾಸೇನ ದೃಷ್ಟಾಂತಮುಖೇನ ದೃಢಯತಿ **ದದ್ಯುರಿತಿ ॥** ಯತ್ರ ಯಸ್ಯಾಮವಸ್ಥಾಯಾಂ ಮಧ್ಯಾಹ್ನಾರ್ಕೇ ಮಧ್ಯಂದಿನಸೂರ್ಯೇ ಸತೀತಿ ಶೇಷಃ । ಸಮಗ್ರಃ ಪೂರ್ಣಃ, ರಾಜಾ ಚಂದ್ರಃ, 'ರಾಜಾ ನೃಪೇ ಲತಾಭೇದೇ ಪತ್ಯೌ ಕ್ಷತ್ರಿಯಚಂದ್ರಯೋಃ' ಇತಿ ನಾನಾರ್ಥರತ್ನಮಾಲಾ, ಗ್ಲಪಿತ ಇವ ಕೃತಃ ಪ್ರತಿಹತಕಾಂತಿಃ ಕೃತಾಃ ಇತಿ ಯಾವತ್, ಗ್ರಹಾಣಾಂ ಬೃಹಸ್ಪತ್ಯಾದೀನಾಂ ಚ ನಿಗ್ರಹಃ ಕೃತಃ ತೇಽಪಿ ಪ್ರತಿಹತಕಾಂತಯಃ ಕೃತಃ । ಇತಿ ಯಾವತ್, ತತ್ರ ತಸ್ಯಾಮವಸ್ಥಾಯಾಂ ಅತಿತನವಃ ಅತಿಕೃಶಾಃ ಖದ್ಯೋತಪೋತಾಃ ಖೇ ದ್ಯೋತಂತೇ ಇತಿ ಖದ್ಯೋತಾಃ ವರ್ಷಾಕಾಲೋದ್ಭವಾಃ ತಮಸಿ ಜ್ವಲಂತಃ ಕೀಟಕವಿಶೇಷಾಃ 'ಖದ್ಯೋತೋ ಜ್ಯೋತಿರಿಂಗಣಃ' ಇತ್ಯಮರಃ; ತೇಷಾಂ ಪೋತಾಃ ಶಿಶವಃ, 'ಪೋತಃ ಶಿಶುಕಪಾತ್ರಯೋಃ' ಇತಿ ನಾನಾರ್ಥರತ್ನಮಾಲಾ, ದ್ಯುತಿಂ ಸ್ವಪ್ರಕಾಶಂ ದದ್ಯುಃ ಕಿಂ ? ನ ದದ್ಯುರೇವ । ಮಧ್ಯಾಹ್ನಾರ್ಕಪ್ರಕಾಶಸಮಯೇ ಯಥಾ ಖದ್ಯೋತ-ಕಾಂತಿಃ ನ ಪ್ರಸರತಿ ತಥಾ ಅಸ್ಮದಾದೀನಾಂ ವಾಕ್ಯಾನಿ ಭಗವತ್ಪಾದಪಾಂಸುಸ್ತುತಿ-ವಿಷಯೇ ನ ಪ್ರಸರಂತೀತ್ಯರ್ಥಃ । ಅಧಿಕ್ರಿಯೇರನ್ ಇತಿ ಅಧಿಪೂರ್ವಕಾತ್ ಕೃಞಃ

ಕರ್ಮಣಿ ರೂಪಮ್ । ದದ್ಯುರಿತಿ ಡುದಾಞ್‌ದಾನೇ ಇತ್ಯಸ್ಮಾತ್ ಕರ್ತರಿ ಲಿಙ್, ಅರ್ಥಾಂತರನ್ಯಾಸೋಽಲಂಕಾರಃ । ಸಾಮಾನ್ಯಂ ವಾ ವಿಶೇಷೋ ವಾ ತದನ್ಯೇನ ಸಮರ್ಥ್ಯತೇ । ಯತ್ರಸೋಽರ್ಥಾಂತರನ್ಯಾಸಃ (ಕಾ.ಪ್ರ.ದ.ಉ.) ಇತಿಲಕ್ಷಣಾತ್ ॥೨॥

**ಅನ್ವಯಃ —** ಯದ್ಗುಣೌಘೇ ಗುರುಗಿರಃ ಚ ಅಬ್ಧೌ ಸ್ರೋತಸ್ತರಂಗಾ ಇವ ಸ್ಖಲಂತಿ, ತೇಷು ಕಸ್ಯ ವಾ ಕೀದೃಶ್ಯಃ ವಾಚಃ ಕ್ವಚ ಅಥ ಕಥಂ ವಾ ಅಧಿಕ್ರಿಯೇರನ್ ? ಯತ್ರ ಮಧ್ಯಾಹ್ನಾರ್ಕೇ ಸಮಗ್ರಃ ರಾಜಾ ಗ್ಲಪಿತ ಇವ ಕೃತಃ ಗ್ರಹಾಣಾಂ ಚ ನಿಗ್ರಹಃ ಕೃತಃ ತತ್ರ ಅತಿತನವಃ ಖದ್ಯೋತಪೋತಾಃ ದ್ಯುತಿಂ ದದ್ಯುಃ ಕಿಮ್ ?

**ಅನ್ವಯಾರ್ಥಃ —** **ಯದ್ಗುಣೌಘೇ** = ಯಾವ ಶ್ರೀಮನ್ಮಹಾವಿಷ್ಣುವಿನ ಪಾದಧೂಳಿಯ ಗುಣಗಳ ಸಮೂಹದಲ್ಲಿ, **ಗುರುಗಿರಃ ಚ** = ಬ್ರಹ್ಮಾದಿಗುರುಗಳ ಮಾತುಗಳೂ ಕೂಡ, **ಅಬ್ಧೌ** = ಸಮುದ್ರದಲ್ಲಿ, **ಸ್ರೋತಸ್ತರಂಗಾ ಇವ** = ವೇಗವುಳ್ಳ ಜಲಪ್ರವಾಹದ ಅಲೆಗಳಂತೆ, **ಸ್ಖಲಂತಿ** =ಜಾರಿಬೀಳುತ್ತವೆಯೋ (ಸ್ತೋತ್ರಮಾಡಲು ಸಮರ್ಥವಾಗುವುದಿಲ್ಲವೋ), **ತೇಷು** = ಅಂತಹ ಶ್ರೀವಿಷ್ಣುವಿನ ಪಾದಧೂಳಿಗಳ ವಿಷಯದಲ್ಲಿ, **ಕಸ್ಯ ವಾ** = ಯಾವ ನಾವೇ ಮೊದಲಾಗಿವುಳ್ಳವನ, **ಕೀದೃಶ್ಯಃ** =ಎಂತಹ, **ವಾಚಃ** = ಮಾತುಗಳು, **ಕ್ವಚ** = ಯಾವ ಗುಣದ ವಿಷಯದಲ್ಲಿ, **ಅಥ** = ಮತ್ತು, **ಕಥಂ ವಾ** = ಯಾವ ಪ್ರಕಾರದಿಂದ, **ಅಧಿಕ್ರಿಯೇರನ್** = ಅಧಿಕಾರವುಳ್ಳವುಗಳಾಗಿ ಮಾಡಲ್ಪಟ್ಟಾವು? **ಯತ್ರ** = ಯಾವ ಅವಸ್ಥೆಯಲ್ಲಿ, **ಮಧ್ಯಾಹ್ನಾರ್ಕೇ ಸತಿ** = ಮಧ್ಯಾಹ್ನಕಾಲದ ಸೂರ್ಯನು ಇರುತ್ತಿರಲಾಗಿ, **ಸಮಗ್ರಃ** = ಸಂಪೂರ್ಣನಾದ, **ರಾಜಾ** = ಚಂದ್ರನು, **ಗ್ಲಪಿತಃ ಇವ ಕೃತಃ** = ಕಾಂತಿಹೀನನಂತೆ ಮಾಡಲ್ಪಟ್ಟವನಾಗಿರುತ್ತಾನೋ, **ಗ್ರಹಾಣಾಂ ಚ** = ಬೃಹಸ್ಪತಿ ಮೊದಲಾದ ಗ್ರಹಗಳಿಗೂ ಕೂಡ, **ನಿಗ್ರಹಃ** = ತಿರಸ್ಕಾರವು, (ಕಾಂತಿಹೀನತೆಯು), **ಕೃತಃ** = ಮಾಡಲ್ಪಟ್ಟಿದೆಯೋ, **ತತ್ರ** = ಆ ಅವಸ್ಥೆಯಲ್ಲಿ, **ಅತಿತನವಃ** = ಅತ್ಯಲ್ಪಗಳಾದ, **ಖದ್ಯೋತಪೋತಾಃ** = ಮಿಂಚುಹುಳದ ಮರಿಗಳು, **ದ್ಯುತಿಂ** = ಕಾಂತಿಯನ್ನು, **ದದ್ಯುಃ ಕಿಂ** = ಕೊಡುತ್ತವೆಯೇನು?

**ತಾತ್ಪರ್ಯ –** ಈಗ ನಮಗೆ ಪರಮಾತ್ಮನ ಪಾದಧೂಳಿಗಳನ್ನು ಸ್ತೋತ್ರಮಾಡುವ ಅಧಿಕಾರವಿಲ್ಲವೆಂದು ತನ್ನ ಅಹಂಕಾರ ಖಂಡನೆಯನ್ನುಮಾಡಿಕೊಳ್ಳುತ್ತಿದ್ದಾರೆ — ಸಣ್ಣ

ತೊರೆಗಳ ಪ್ರವಾಹಗಳು ಸಮುದ್ರವನ್ನು ಸೇರಲು ಮುನ್ನುಗ್ಗುವಾಗ ಅವುಗಳ ಅಲೆಗಳನ್ನು ಸಮುದ್ರವು ತನ್ನ ಬಲವಾದ ಅಲೆಗಳಿಂದ ಬಡಿದು ಹಿಂದಕ್ಕೆ ಅಟ್ಟುತ್ತದೆ. ಸಣ್ಣ ತೊರೆಗಳಿಗೆ ಸಮುದ್ರವನ್ನು ಸೇರಲು ಬಹಳ ಕಷ್ಟವಾಗುತ್ತದೆ. ಅದರಂತೆ ಬ್ರಹ್ಮಾದಿಜಗದ್ಗುರುಗಳ ಮಾತುಗಳೂ ಕೂಡ ಪರಮಾತ್ಮನ ಪಾದಧೂಳಿಗಳ ಗುಣಸಮೂಹವನ್ನು ಸಂಪೂರ್ಣ-ವಾಗಿ ವಿಷಯೀಕರಿಸಲಾಗದೇ, ವರ್ಣಿಸಲಾಗದೇ, ಜಾರುತ್ತವೆ. ಹಿಂದಿರುಗುತ್ತವೆ. ಅಂತಹ ಪರಮಾತ್ಮನ ಪಾದಧೂಳಿಗಳ ಗುಣಗಳನ್ನು ಪೂರ್ಣವಾಗಿ ಸ್ತೋತ್ರಮಾಡುವ ಯಾವ ಅಧಿಕಾರಿಗೆ, ಯಾವ ಮಾತುಗಳಿಗೆ, ಯಾವ ಗುಣದ ವಿಷಯದಲ್ಲಿ ಯಾವ ಪ್ರಕಾರದಿಂದ ಅಧಿಕಾರವಿದೆ ? ಮಧ್ಯಾಹ್ನಸಮಯದಲ್ಲಿ ಕಲಾಪರಿಪೂರ್ಣನಾದ ಚಂದ್ರನಿದ್ದರೂ ಅವನ ಕಾಂತಿಯು ಮಂಕಾಗಿರುತ್ತದೆ. ಅವನು ಸ್ವಲ್ಪವೂ ಪ್ರಕಾಶಿಸುವುದಿಲ್ಲ. ಗುರು, ಅಂಗಾರಕಾದಿ ಗ್ರಹಗಳೂ ಮಂಕಾಗಿರುತ್ತವೆ. ಹೀಗಿರುವಾಗ ಮಿಂಚುಹುಳದ ಚಿಕ್ಕ ಚಿಕ್ಕ ಮರಿಗಳು ಆ ಮಧ್ಯಾಹ್ನಸೂರ್ಯನ ಪ್ರಖರ ಪ್ರಕಾಶದಲ್ಲಿ ಸ್ವಲ್ಪವೂ ಪ್ರಕಾಶವನ್ನು ಬೀರುವುದಿಲ್ಲವೆಂದು ಹೇಳಬೇಕಾದ್ದೇನಿದೆ ? (ಇಲ್ಲಿ ಸಾಮಾನ್ಯದಿಂದ ವಿಶೇಷವನ್ನು ಸಮರ್ಥನ ಮಾಡಿದ್ದರಿಂದ ಅರ್ಥಾಂತರನ್ಯಾಸಾಲಂಕಾರ).

**ಯಾತ್ರಾಪಾತ್ರಂ ಪಯೋಧಾವಿವ ಲಯಸಮಯೇ ಮಂಡಲಂ ವಾಂಡಕೋಶೇ**
**ರಕ್ತಾಂಗಸ್ಯ ವ್ರಜೇ ವಾ ದಿವಸಕರರುಚಾಂ ಕೋರಕಂ ಕೈರವಸ್ಯ ।**
**ಯಜ್ಜ್ಞಾನೇ ಭಾತಿ ಕೃತ್ಸ್ನಂ ಜಗದತಿವಿಶದೇ ನಿತ್ಯನಿರ್ದೋಷವಿದ್ಯಾಂ**
**ಆದ್ಯಾಂ ಪದ್ಮಾಲಯಾಂ ತಾಂ ಹರಿಚರಣರಜೋರಾಗಿಣೀಂ ರಾಧಯಾಮಃ ।೩॥**

**ವ್ಯಾಖ್ಯಾನ—** ಇದಾನೀಂ ಸಕಲವಾಙ್ಮನಸದೇವತಾತ್ವೇನ ಲಕ್ಷ್ಮೀಪ್ರಾರ್ಥನಸ್ಯ ಆವಶ್ಯಕತ್ವಾತ್, ಪಾರ್ಥಕ್ಯೇನ ತದ್‌ವಂದನೇ, 'ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾ-ಸಕ್ತಚೇತಸಾಂ' ಇತ್ಯನರ್ಥೋಕ್ತೇಃ, ವಿಷ್ಣುಸೇವಕತ್ವೇನ ಲಕ್ಷ್ಮೀಂ ಪ್ರಾರ್ಥಯತೇ— **ಯಾತ್ರಾಪಾತ್ರಾಮಿತಿ ॥** ಲಯಸಮಯೇ ಪ್ರಲಯಕಾಲೇ ಪಯೋಧೌ ಕ್ಷೀರ-ಸಮುದ್ರೇ ಯಾತ್ರಾಪಾತ್ರಮಿವ ಪ್ಲವ ಇವ, ಅಂಡಕೋಶೇ ಬ್ರಹ್ಮಾಂಡೇ ರಕ್ತಾಂಗಸ್ಯ ಮಂಗಳಸ್ಯ, 'ಅಂಗಾರಕಃ ಕುಜೋ ಭೌಮೋ ಲೋಹಿತಾಂಗೋ ಮಹೀಸುತಃ' ಇತ್ಯಮರಃ । ಮಂಡಲಂ ವಾ ಮಂಡಲಮಿವ, 'ವಾ ವಿಕಲ್ಪೋಪಮಾನಯೋಃ'

ಇತ್ಯಭಿಧಾನಾತ್, ದಿವಸಕರರುಚಾಂ ಸೂರ್ಯರಶ್ಮೀನಾಂ ವ್ರಜೇ ಸಮೂಹೇ ಕೈರವಸ್ಯ ಕುಮುದಸ್ಯ, 'ಇಂದೀವರಂ ಚ ನೀಲೇಽಸ್ಮಿನ್ ಸಿತೇ ಕುಮುದಕೈರವೇ' ಇತ್ಯಮರಃ, ಕೋರಕಂ ವಾ ಸೂಕ್ಷ್ಮಕಲಿಕೇವ, 'ಕಲಿಕಾ ಕೋರಕಃ ಪುಮಾನ್' ಇತ್ಯಮರಃ, ಯದ್ಯಪಿ ಕೋರಕಶಬ್ದಃ ಅಮರೇ ಪುಲ್ಲಿಂಗತ್ವೇನ ಪಠಿತಃ ತಥಾಪಿ ಅರ್ಧರ್ಚಾದೇರಾಕೃತಿಗಣತ್ವೇನ ತತ್ರ ಪಾಠಾತ್ ನಪುಂಸಕತ್ವಂ ಚ । ಅತಿವಿಶದೇ ಅತಿಸ್ಪಷ್ಟೇ ಯಜ್‌ಜ್ಞಾನೇ ಯಸ್ಯಾಃ ಲಕ್ಷ್ಮ್ಯಾಃ ಜ್ಞಾನೇ, ಕೃತ್ಸ್ನಂ ಜಗತ್ ಭಾತಿ ಪ್ರಕಾಶತೇ, ತಾಂ ನಿತ್ಯನಿರ್ದೋಷವಿದ್ಯಾಂ ನಿತ್ಯ ನಿರ್ದೋಷಾ, ಅಥವಾ ನಿತ್ಯಾ ನಿರ್ದೋಷಾ ವಿದ್ಯಾ ಜ್ಞಾನಂ ಯಸ್ಯಾಃ ಸಾ, ತಾಂ, ಹರಿಚರಣರಜೋರಾಗಿಣೀಂ ಹರಿಚರಣರಜಸ್ಸು ರಾಗಃ ಅಸ್ಯಾಃ ಅಸ್ತೀತಿ ತಾಂ, ಆದ್ಯಾಂ ಬ್ರಹ್ಮಾದ್ಯುತ್ಪತ್ತೇಃ ಪೂರ್ವಮೇವ ವಿದ್ಯಮಾನಾಂ ಪದ್ಮಾಲಯಾಂ ಲಕ್ಷ್ಮೀಂ 'ಲಕ್ಷ್ಮೀಃ ಪದ್ಮಾಲಯಾ ಪದ್ಮಾ' ಇತ್ಯಮರಃ । ರಾಧಯಾಮಃ ಭಕ್ತ್ಯಾ ಫಲದಾನಸಮರ್ಥಾಂ ಕುರ್ಮಃ, ರಾಧ ಸಾಧ ಸಂಸಿದ್ಧಾವಿತಿ ಧಾತೋಃ ಹೇತುಮಣ್ಣಿಜಂತಾತ್ ಕರ್ತರಿ ಲಟ್ । ಸಂಸಿದ್ಧಿಃ ಫಲದಾನಮತ್ರ । ಸಿದ್ಧ್ಯತೀತ್ಯಾದೌ ಫಲದಾನೇ ಪ್ರಯೋಗಾತ್ । ಯಥಾ ಯಾತ್ರಾಪಾತ್ರಾದಿಕಂ ಪಯೋಧ್ಯೇಕದೇಶೇ ವರ್ತತೇ, ತಥಾ ಸರ್ವಂ ಜಗತ್ ತಜ್ ಜ್ಞಾನೈಕದೇಶೇ ವಿಷಯತಯಾ ವರ್ತತೇ ಇತ್ಯುಕ್ತ್ಯಾ ಸರ್ವಜಗದಪೇಕ್ಷಯಾ ವಿಷಯರೂಪಾಧಾರಸ್ಯ ಜ್ಞಾನಸ್ಯ ಆಧಿಕ್ಯೋಕ್ತ್ಯಾ ಅಧಿಕಾಲಂಕಾರಃ । ಮಹತೋ-ರ್ಯನ್ಮಹೀಯಾಂಸಾವಾಶ್ರಿತಾಶ್ರಯಯೋಃ ಕ್ರಮಾತ್ । ಆಶ್ರಯಾಶ್ರಯಿಣೌ ಸ್ಯಾತಾಂ ತನುತ್ವೇಽಪ್ಯಧಿಕಂ ತು ತತ್ ಇತಿ ಲಕ್ಷಣಾತ್ । ಉಪಮಾಯಾಃ ಅಪಿ ವಿದ್ಯಮಾನತ್ವಾತ್ ಅಲಂಕಾರಸಂಸೃಷ್ಟಿಃ ॥೩॥

**ಅನ್ವಯಃ —** ಲಯಸಮಯೇ ಪಯೋಧೌ ಯಾತ್ರಾಪಾತ್ರಂ ಇವ, ಅಂಡಕೋಶೇ ರಕ್ತಾಂಗಸ್ಯ ಮಂಡಲಂ ವಾ, ದಿವಸಕರರುಚಾಂ ವ್ರಜೇ ಕೈರವಸ್ಯ ಕೋರಕಂ ವಾ, ಅತಿವಿಶದೇ ಯಜ್‌ಜ್ಞಾನೇ ಕೃತ್ಸ್ನಂ ಜಗತ್ ಭಾತಿ, ತಾಂ ನಿತ್ಯನಿರ್ದೋಷವಿದ್ಯಾಂ ಹರಿಚರಣ-ರಜೋರಾಗಿಣೀಂ ಆದ್ಯಾಂ ಪದ್ಮಾಲಯಾಂ ರಾಧಯಾಮಃ ॥

**ಅನ್ವಯಾರ್ಥಃ —** ಲಯಸಮಯೇ = ಪ್ರಲಯಕಾಲದಲ್ಲಿ, ಪಯೋಧೌ= ಸಮುದ್ರದಲ್ಲಿ, ಯಾತ್ರಾಪಾತ್ರಂ ಇವ = ತೆಪ್ಪದಂತೆ, ಅಂಡಕೋಶೇ = ಬ್ರಹ್ಮಾಂಡದಲ್ಲಿ, ರಕ್ತಾಂಗಸ್ಯ = ಮಂಗಳಗ್ರಹದೇವತೆಯ, ಮಂಡಲಂ ವಾ = ಮಂಡಲದಂತೆ, ದಿವಸ-ಕರರುಚಾಂ = ಸೂರ್ಯನರಶ್ಮಿಗಳ, ವ್ರಜೇ = ಸಮೂಹದಲ್ಲಿ, ಕೈರವಸ್ಯ = ನೈದಿಲೆ-

ಹೂವಿನ, **ಕೋರಕಂ ವಾ** = ಮೊಗ್ಗಿನಂತೆ, **ಅತಿವಿಶದೇ** = ಅತ್ಯಂತಸ್ಪಷ್ಟವಾದ, **ಯಜ್‌ಜ್ಞಾನೇ** = ಯಾವ ಲಕ್ಷ್ಮೀದೇವಿಯ ಜ್ಞಾನದಲ್ಲಿ, **ಕೃತ್ಸ್ನಂ** = ಸಂಪೂರ್ಣವಾದ, **ಜಗತ್** = ಪ್ರಪಂಚವು, **ಭಾತಿ** = ಪ್ರಕಾಶಿಸುತ್ತಿದೆಯೋ (ವಿಷಯವಾಗಿರುತ್ತದೆಯೋ), **ತಾಂ** = ಅಂತಹ, **ನಿತ್ಯನಿರ್ದೋಷವಿದ್ಯಾಂ, ನಿತ್ಯ** = ಯಾವಾಗಲೂ, (ನಿತ್ಯ = ಉತ್ಪತ್ತಿ-ನಾಶವಿಲ್ಲದ) **ನಿರ್ದೋಷ** = ದೋಷರಹಿತವಾದ, **ವಿದ್ಯಾಂ** = ಜ್ಞಾನವುಳ್ಳ, **ಹರಿಚರಣ-ರಜೋರಾಗಿಣೀಂ** = ಶ್ರೀಮನ್ನಾರಾಯಣನ ಪಾದಧೂಳಿಗಳಲ್ಲಿ ಅನುರಾಗವುಳ್ಳ (ಭಕ್ತಿಯುಳ್ಳ), **ಆದ್ಯಾಂ** = ಬ್ರಹ್ಮಾದಿದೇವತೆಗಳಿಂದಲೂ ಮೊದಲನೆಯವಳಾದ, **ಪದ್ಮಾಲಯಾಂ** = ಕಮಲವಾಸಿನಿಯಾದ ಮಹಾಲಕ್ಷ್ಮೀದೇವಿಯನ್ನು, **ರಾಧಯಾಮಃ** = ಫಲವನ್ನು ಕೊಡುವಂತೆ ಭಕ್ತಿಯಿಂದ ಸೇವಿಸುತ್ತೇವೆ. (ಸೇವಿಸಿ ಸಿದ್ಧಿ ಹೊಂದುತ್ತೇವೆ.)

**ತಾತ್ಪರ್ಯ** — ಈಗ ಎಲ್ಲರ ಮಾತು ಮನಸ್ಸುಗಳು ದೇವತಾರೂಪಳಾದ ಲಕ್ಷ್ಮೀ-ಪ್ರಾರ್ಥನೆಯನ್ನು ಮಾಡುತ್ತಾ, ಪ್ರತ್ಯೇಕವಾಗಿ ಅವಳ ವಂದನವು ಕ್ಲೇಶಕರವಾದುದರಿಂದ ಶ್ರೀವಿಷ್ಣುವಿನ ಸೇವಾಭಕ್ತಿಪರಾಯಣಳೆಂದು ಲಕ್ಷ್ಮಿಯನ್ನು ಪ್ರಾರ್ಥಿಸುತ್ತಾರೆ. —

ಪ್ರಲಯಕಾಲದ ಸಮುದ್ರದಲ್ಲಿ, ಒಂದೇ ಒಂದು ಚಿಕ್ಕ ತೆಪ್ಪವು ವಿಶಾಲ ಸಮುದ್ರದ ಒಂದು ಚಿಕ್ಕ ಪ್ರದೇಶದಲ್ಲಿ ಸ್ಪಷ್ಟವಾಗಿ ಕಾಣಿಸುತ್ತಾ ಇರುತ್ತದೆ. ಬ್ರಹ್ಮಾಂಡದಲ್ಲಿ ಅಂಗಾರಕನ ಮಂಡಲವು ಕೆಂಪಾಗಿ ಪ್ರತ್ಯೇಕವಾಗಿ ಕಾಣಿಸುತ್ತದೆ, ಸೂರ್ಯನ ಕಿರಣಗಳ ಕಾಂತಿಯಲ್ಲಿ ಹಗಲು ಮೊಗ್ಗಾಗಿರುವ ನೈದಿಲೆಹೂವು ಪ್ರತ್ಯೇಕವಾಗಿದ್ದು ಕಾಣಿಸುತ್ತದೆ. ಹಾಗೆಯೇ ಸಮಸ್ತ ಜಗತ್ತು ಅತ್ಯಂತಸ್ಪಷ್ಟವಾದ ಲಕ್ಷ್ಮೀದೇವಿಯ ಜ್ಞಾನಕ್ಕೆ ವಿಷಯವಾಗುತ್ತದೆ. ಲಕ್ಷ್ಮೀದೇವಿಯು ನಿತ್ಯವಾದ ದೋಷರಹಿತವಾದ ಜ್ಞಾನವುಳ್ಳ ಬ್ರಹ್ಮಾದಿಗಳಿಗಿಂತಲೂ ಹಿರಿಯವಳು. ಪರಮಾತ್ಮನ ಪಾದಪದ್ಮಪರಾಗಗಳಲ್ಲಿ ಅತಿಶಯವಾದ ಅನುರಾಗವುಳ್ಳವಳು. ಇಂತಹ ಪದ್ಮನಿವಾಸಿನಿಯಾದ ಲಕ್ಷ್ಮೀದೇವಿಯನ್ನು ನಾವು ಭಕ್ತಿಯಿಂದ ಆರಾಧಿಸಿ ನಮಗೆ ಫಲಕೊಡುವಂತೆ ಪ್ರಸನ್ನಳನ್ನಾಗಿ ಮಾಡಿಕೊಳ್ಳುತ್ತೇವೆ. ಇಷ್ಟು ದೊಡ್ಡ ಪ್ರಪಂಚವು ಲಕ್ಷ್ಮೀದೇವಿಯ ಜ್ಞಾನದಲ್ಲಿ ಏಕದೇಶದಲ್ಲಿ ಒಂದು ಮೂಲೆಯಲ್ಲಿ ಅತ್ಯಂತ ಚಿಕ್ಕದಾಗಿಯೂ ಸ್ಪಷ್ಟವಾಗಿಯೂ ಕಾಣಿಸುತ್ತಿದೆ. ಇಂತಹ ಅತಿ ಮಹತ್ತಾದ ಜ್ಞಾನವುಳ್ಳ ಆ ದೇವಿಯೂ ಪರಮಾತ್ಮನ ಪಾದಧೂಳಿಗಳಲ್ಲಿರುವ ಗುಣಗಳನ್ನು ಪರಿಗಣಿಸುತ್ತಾ, ಸ್ವಾಮಿಯ ಪಾದಪದ್ಮವನ್ನು ಭಜಿಸುತ್ತಾಳೆ ಎಂದು ಹೇಳಿದ್ದರಿಂದ ಲಕ್ಷ್ಮೀದೇವಿಯಿಂದ ಆರಾಧ್ಯನಾದ ಶ್ರೀಹರಿಯು ಮಹಾಮಾಹಾತ್ಮ್ಯಸಂಪನ್ನನೆಂದು ತಿಳಿಸಿದ್ದಾರೆ.

**ಲಕ್ಷ್ಮೀರಕ್ಷೀಣದೀಕ್ಷಾಗಣಯಿತುಮನುಪಕ್ರಾಂತಸಂವಿದ್ಗುಣಾನಾಂ**
**ಆನಂತ್ಯಾನಿ ಸ್ವಭರ್ತುಃ ಪದಕಮಲಕನಿಷ್ಠಾಂಗುಲೀಸನ್ನಖಸ್ಯ ।**
**ಪಶ್ಯಂತೀ ಸಂತತಂ ಸಾ ನವನವಸುವಿಶೇಷೋಪಲಂಭೇನ ತತ್ತತ್**
**ಕಾಲೇ ಕೌತೂಹಲಾಬ್ಧೌ ಸುಮಹತಿ ಗಹನೇ ಗಾಹಮಾನಾವತಾನ್ನಃ ॥೪॥**

**ವ್ಯಾಖ್ಯಾನ-** ಹರಿಚರಣರಜೋರಾಗಿಣೀಮಿತ್ಯನೇನ ಜ್ಞಾಪಿತಂ ಮಹಾಲಕ್ಷ್ಮ್ಯಾಃ ಸಕಾಶಾತ್ ಉತ್ತಮತ್ವಂ ಭಗವತೋ ವಿಶದಯತಿ - **ಲಕ್ಷ್ಮೀರಿತ್ಯಾದಿನಾ** ॥ ಅನುಪಕ್ರಾಂತಸಂವಿತ್, ಉಪಕ್ರಾಂತಾ ಇದಂ ಪ್ರಾಥಮ್ಯೇನ ಆರಬ್ಧಾ, ಉಪಕ್ರಾಂತಾ ನ ಭವತೀತ್ಯನುಪಕ್ರಾಂತಾ, ತಾದೃಶೀ ಸಂವಿತ್ ಜ್ಞಾನಂ ಯಸ್ಯಾಂ ಸಾ ಅನುಪಕ್ರಾಂತ-ಸಂವಿತ್, ಅನಾದಿಜ್ಞಾನಾ ಇತ್ಯರ್ಥಃ । **ಸ್ವಭರ್ತುಃ** ಸ್ವಸ್ಯಾಃ ಪತ್ಯುಃ ಶ್ರೀವಿಷ್ಣೋಃ **ಪದಕಮಲಕನಿಷ್ಠಾಂಗುಲೀಸನ್ನಖಸ್ಯ** ಪಾದಕಮಲಕನಿಷ್ಠಾಂಗುಲ್ಯಾಃ ಸನ್ನಖಸ್ಯ ನಿರ್ದೋಷನಖಸ್ಯ **ಗುಣಾನಾಂ ಆನಂತ್ಯಾನಿ ಗಣಯಿತುಂ** ಸಂಖ್ಯಾತುಂ **ಅಕ್ಷೀಣ-ದೀಕ್ಷಾ** ಅಕ್ಷಯದೀಕ್ಷಾ ತದ್ಗುಣಗಣನಾಯಾಂ ಸರ್ವದಾ ಸಾವಧಾನಾ ಇತ್ಯರ್ಥಃ, **ಸಂತತಂ ಪಶ್ಯಂತೀ ಆನಂತ್ಯಾನಿ** ಇತಿ ಸಂಬಧ್ಯತೇ, ನಿರಂತರಂ ಗುಣಾನಂತ್ಯಾನಿ ವೀಕ್ಷಮಾಣಾ ಗುಣಾನಂತ್ಯಸನ್ನಿಕೃಷ್ಟೇಂದ್ರಿಯಾಪೀತ್ಯರ್ಥಃ, **ತತ್ತತ್ಕಾಲೇ** ತಸ್ಮಿನ್ ತಸ್ಮಿನ್ ಕಾಲವಿಶೇಷೇ **ನವನವಸುವಿಶೇಷೋಪಲಂಭೇನ** ನೂತನನೂತನವಿಶೇಷಸಾಕ್ಷಾ-ತ್ಕಾರೇಣ **ಸುಮಹತಿ** ಅತ್ಯಂತಂ ಮಹತಿ **ಗಹನೇ** ಗಂಭೀರೇ **ಕೌತೂಹಲಾಬ್ಧೌ** ಆಶ್ಚರ್ಯಸಮುದ್ರೇ **ಗಾಹಮಾನಾ** ಅವಗಾಹಮಾನಾ **ಸಾ ಲಕ್ಷ್ಮೀಃ ನಃ ಅವತಾತ್** ರಕ್ಷತಾತ್ । 'ಅವ ರಕ್ಷಣೇ' ಇತ್ಯಸ್ಮಾತ್ ಕರ್ತರಿ ಲೋಟ್ । ಸಾದಿಜ್ಞಾನಸ್ಯ ಪೂರ್ವಾಜ್ಞಾತ-ನೂತನವಿಶೇಷೋಪಲಂಭಃ ಸಂಭಾವಿತಃ, ಅನಾದಿಜ್ಞಾನಸ್ಯಾಪಿಪೂರ್ವಂ ಇಂದ್ರಿಯಾ-ರ್ಥಸನ್ನಿಕರ್ಷಾಭಾವಾತ್ ಅಭಿವ್ಯಕ್ತ್ಯಭಾವಾತ್ (ಇಂದ್ರಿಯಾರ್ಥಸನ್ನಿಕರ್ಷಸತ್ತ್ವೇ ಅಭಿ-ವ್ಯಕ್ತಿದಶಾಯಾಂ ವಾ) ನೂತನ ವಿಶೇಷೋಪಲಂಭಃ ಸಂಭಾವಿತಃ । ಅನಾದಿಜ್ಞಾನಸ್ಯ ಇಂದ್ರಿಯಾರ್ಥಸನ್ನಿಕರ್ಷೇಽಪಿ ಅಸಾವಧಾನತ್ವದಶಾಯಾಂ ಅಭಿವ್ಯಕ್ತ್ಯಭಾವೇನ ಅನು-ಪಲಭ್ಯಮಾನಾನಾಂ, ಸಾವಧಾನತ್ವದಶಾಯಾಂ ನೂತನವಿಶೇಷಾಣಾಂ ಉಪಲಂಭಃ ಸಂಭಾವಿತಃ, ಅಹಂ ತು ಅನಾದಿಜ್ಞಾನಾ ಸರ್ವದಾ ಸಾವಧಾನತ್ವೇನ ಪಶ್ಯಂತ್ಯಪಿ ನಖಮಾತ್ರಗುಣಾನಂತ್ಯಾನಿ ಪೂರ್ವಾಜ್ಞಾತಾನ್ಯೇವ ಪಶ್ಯಾಮಿ ಮಹದಾಶ್ಚರ್ಯ-

ಮೇತತ್ ಇತ್ಯೇವಂ ಆಶ್ಚರ್ಯಯುಕ್ತಾ ಭವತಿ ಲಕ್ಷ್ಮೀಃ ಇತಿ ಭಾವಃ। ಯದ್ವಾ ಪಶ್ಯಂತೀ ಇತ್ಯಸ್ಯ ಸಾಕ್ಷಾತ್ ಕುರ್ವತೀ ಇತ್ಯರ್ಥಃ। ಅಸ್ಮಿನ್ ಪಕ್ಷೇ ಅನಾದಿಕಾಲೇ ಭಗವದ್ಗುಣಾನಂತ್ಯಾನಿ ಸಾಕ್ಷಾತ್‌ಕುರ್ವತ್ಯಾಃ ಅಪಿ ಮಮ ಪೂರ್ವಾಜ್ಞಾತವಿಶೇಷೋಪಲಂಭೋ ಭವತಿ, ಅತೋ ಮಹದಾಶ್ಚರ್ಯಮಿತಿ ಲಕ್ಷ್ಮ್ಯಾಃ ಆಶ್ಚರ್ಯಂ ಉಪಪಾದನೀಯಂ। 'ಜಾನತ್ಯಾಃ ಅಪಿ ದೇವ್ಯಾಃ ಲೋಕಾನುಗ್ರಹಾರ್ಥಂ ವಿಶೇಷಜ್ಞಾನಾರ್ಥಂ ಚ ಕೋಽಯಮಾತ್ಮೇತಿ ಪೃಷ್ಟಃ' ಇತ್ಯಾದಿನಾ ಐತರೇಯಭಾಷ್ಯೇ ಲಕ್ಷ್ಮ್ಯಾಃ ಅಪಿ ಪೂರ್ವಾಜ್ಞಾತವಿಶೇಷಜ್ಞಾನಮುಕ್ತಮ್ । ಅತ್ರ ವಿಶೇಷೋಪಲಂಭಹೇತುನಿಷೇಧೇಽಪಿ ವಿಶೇಷೋಪಲಂಭರೂಪಫಲವ್ಯಕ್ತೇಃ ವಿಭಾವನಾಲಂಕಾರಃ । 'ಕ್ರಿಯಾಯಾಃ ಪ್ರತಿಷೇಧೇಽಪಿ ಫಲವ್ಯಕ್ತಿರ್ವಿಭಾವನಾ' ಇತಿಲಕ್ಷಣಾತ್ ॥

**ಅನ್ವಯ** — ಅನುಪಕ್ರಾಂತಸಂವಿತ್ ಸ್ವಭರ್ತುಃ ಪದಕಮಲಕನಿಷ್ಠಾಂಗುಲೀಸನ್ನಖಸ್ಯ ಗುಣಾನಾಂ ಆನಂತ್ಯಾನಿ ಗಣಯಿತುಂ ಅಕ್ಷೀಣದೀಕ್ಷಾ ಸಂತತಂ (ಆನಂತ್ಯಾನಿ) ಪಶ್ಯಂತೀ ತತ್ತತ್ಕಾಲೇ ನವನವಸುವಿಶೇಷೋಪಲಂಭೇನ ಸುಮಹತಿ ಗಹನೇ ಕೌತೂಹಲಾಬ್ಧೌ ಗಾಹಮಾನಾ ಸಾ ಲಕ್ಷ್ಮೀಃ ನಃ ಅವತಾತ್ ॥

**ಅನ್ವಯಾರ್ಥ**— **ಅನುಪಕ್ರಾಂತಸಂವಿತ್** = ಅನಾದಿಯಾದ ಜ್ಞಾನವುಳ್ಳ, **ಸ್ವಭರ್ತುಃ** = ತನ್ನ ಪತಿಯಾದ ಶ್ರೀಮನ್ಮಹಾವಿಷ್ಣುವಿನ, **ಪದಕಮಲಕನಿಷ್ಠಾಂಗುಲೀಸನ್ನಖಸ್ಯ**, **ಪದಕಮಲ** = ಪಾದಪದ್ಮದ, **ಕನಿಷ್ಠಾಂಗುಲೀ** = ಕಿರುಬೆರಳಿನ, **ಸನ್ನಖಸ್ಯ** = ಸುಂದರವಾದ ನಿರ್ದೋಷವಾದ ಉಗುರಿನ, **ಗುಣಾನಾಂ** = ಗುಣಗಳ, **ಆನಂತ್ಯಾನಿ** = ಅಸಂಖ್ಯಾತತ್ವವನ್ನು(ಲೆಕ್ಕಮಾಡಲು ಬಾರದಿರುವುದನ್ನು) **ಗಣಯಿತುಂ** = ಲೆಕ್ಕಮಾಡಲು, **ಅಕ್ಷೀಣದೀಕ್ಷಾ** = ಎಂದೂ ಕ್ಷೀಣಿಸದ ಸಂಕಲ್ಪವುಳ್ಳ, **ಸಂತತಂ** = ನಿರಂತರವಾಗಿ (**ಆನಂತ್ಯಾನಿ** = ಗುಣಗಳ ಅನಂತತೆಯನ್ನು) **ಪಶ್ಯಂತೀ** = ನೋಡುತ್ತಿರುವ, **ತತ್ತತ್ಕಾಲೇ** = ಆಯಾಯಕಾಲವಿಶೇಷದಲ್ಲಿ, **ನವನವಸುವಿಶೇಷೋಪಲಂಭೇನ** = ಹೊಸಹೊಸದಾದ ಗುಣಾನಂತ್ಯಗಳ ಸಾಕ್ಷಾತ್ಕಾರದಿಂದ, **ಸುಮಹತಿ** = ಬಹಳ ದೊಡ್ಡದಾದ, **ಗಹನೇ** = ಆಳವಾದ, **ಕೌತೂಹಲಾಬ್ಧೌ** = ಆಶ್ಚರ್ಯಸಮುದ್ರದಲ್ಲಿ, **ಗಾಹಮಾನಾ** = ಮುಳುಗುತ್ತಿರುವ, **ಸಾ** = ಅಂತಹ, **ಲಕ್ಷ್ಮೀಃ** = ಲಕ್ಷ್ಮೀದೇವಿಯು, **ನಃ** = ನಮ್ಮನ್ನು, **ಅವತಾತ್** = ಕಾಪಾಡಲಿ.

**ತಾತ್ಪರ್ಯ** — ಲಕ್ಷ್ಮೀದೇವಿಯು ಅನಾದಿಯಾದ ಜ್ಞಾನವುಳ್ಳವಳು. ತನ್ನ ಪತಿಯಾದ ಶ್ರೀಹರಿಯ ಪಾದಕಮಲದ ಕಿರುಬೆರಳಿನ ನಿರ್ದೋಷವಾದ ಒಂದು ಉಗುರಿನ ಅನಂತಗುಣಗಳನ್ನು ಲೆಕ್ಕ ಮಾಡಲು ಎಂದೂ ಕಡಿಮೆಯಾಗದ ದೃಢಸಂಕಲ್ಪವನ್ನು ಮಾಡಿ ಅದರಲ್ಲಿ ಪ್ರವೃತ್ತಳಾದಳು. ನಿರಂತರವಾಗಿ ಉಗುರಿನ ಗುಣಗಳ ಕಡೆಗೆ ಕಣ್ಣನ್ನು ನೆಟ್ಟು ನೋಡುತ್ತಲಿದ್ದಳು. ಆದರೆ ಅಂತಹ ಸಾವಧಾನವಾಗಿ ನೋಡುವ ಅವಳಿಗೂ ಆಯಾ ಕಾಲವಿಶೇಷದಲ್ಲಿಯೂ ಕೂಡ ಪರಮಾತ್ಮನ ಕಿರುಬೆರಳಿನ ಉಗುರಿನ ಗುಣಗಳ ಅಸಂಖ್ಯಾತತ್ವದಲ್ಲಿಯೂ ಅನಂತತೆಯೆಂಬ ಹೊಸಹೊಸದಾದ ವಿಶೇಷವು ಕಂಡು ಬಂದಿತು. ಆಗ ಅವಳು ಅತಿಮಹತ್ತಾದ ಗಂಭೀರವಾದ ಆಶ್ಚರ್ಯಸಮುದ್ರದಲ್ಲಿ ಮಗ್ನಳಾಗಿ ಪರಮಾತ್ಮನ ಕಿರುಬೆರಳಿನ ಉಗುರನ್ನು ನೋಡುತ್ತಾ ಕುಳಿತುಬಿಟ್ಟಳು. ಇಂತಹ ಲಕ್ಷ್ಮಿಯು ನಮ್ಮನ್ನು ಕಾಪಾಡಲಿ.

ಉತ್ಪತ್ತಿಯುಳ್ಳ ನಮ್ಮಂತಹವರ ಜ್ಞಾನಕ್ಕೆ ಹಿಂದೆ ತಿಳಿದಿರದ ಹೊಸವಿಶೇಷಗಳು ಮತ್ತೊಂದು ಜ್ಞಾನದಲ್ಲಿ ತೋರಬಹುದು. ಉತ್ಪತ್ತಿ ಇಲ್ಲದ ಮಹಾತ್ಮರ ಜ್ಞಾನಕ್ಕೂ ವಸ್ತುಗಳ ಸಂಬಂಧವಿಲ್ಲದಾಗ, ಅಭಿವ್ಯಕ್ತಿ ಇಲ್ಲದಿದ್ದಾಗ ತೋರದಿದ್ದ ವಿಶೇಷಗಳು, ವಸ್ತುವಿಗೂ ಇಂದ್ರಿಯಕ್ಕೂ ಸಂಬಂಧ ಉಂಟಾದಾಗ, ಅಥವಾ ಜ್ಞಾನದ ಅಭಿವ್ಯಕ್ತಿಯಾದಾಗ ಹೊಸವಿಶೇಷಗಳು ತೋರಬಹುದು. ಜ್ಞಾನವು ಅನಾದಿಯಾದರೂ ಇಂದ್ರಿಯವಿಷಯ ಸಂಬಂಧವಿದ್ದರೂ ಅಸಾವಧಾನತೆಯಿದ್ದರೆ, ಬೇರೆ ಕಡೆ ಮನಸ್ಸಿದ್ದರೆ ವಿಶೇಷಗಳು ತೋರದೆ ಇದ್ದು ಸಾವಧಾನವಾಗಿ ನೋಡುವಾಗ ವಿಶೇಷಗಳು ತೋರಬಹುದು. ಆದರೆ ಲಕ್ಷ್ಮೀದೇವಿಯು ಹೇಳುತ್ತಾಳೆ— 'ನಾನು ಅನಾದಿಜ್ಞಾನವುಳ್ಳವಳು, ಯಾವಾಗಲೂ ಸಾವಧಾನವಾಗಿ ನನ್ನ ಸ್ವರೂಪನೇತ್ರದಿಂದ ಪರಮಾತ್ಮನ ಕಿರುಬೆರಳಿನ ಉಗುರಿನ ಗುಣಗಳ ಅನಂತತೆಯನ್ನು ನೋಡುತ್ತಿದ್ದೇನೆ. ಆದರೆ ನಾನೂ ಕೂಡ ಕೇವಲ ಒಂದು ಉಗುರಿನ ಗುಣಗಳ ಅನಂತತೆಗಳನ್ನು ಕೂಡ ಹಿಂದೆ ತಿಳಿಯದೆ ಇದ್ದವುಗಳನ್ನೇ ನೋಡುತ್ತಿದ್ದೇನೆ. ಇದು ಬಹಳ ಆಶ್ಚರ್ಯ' ಎಂದು ಲಕ್ಷ್ಮೀದೇವಿಯು ಚಕಿತಳಾಗುತ್ತಾಳೆ. ಲಕ್ಷ್ಮೀದೇವಿಯು ಗುಣಗಳು ಅನಂತವಾಗಿದೆ ಎಂದು ಸಾಕ್ಷಾತ್ಕರಿಸುತ್ತಿದ್ದರೂ ಹಿಂದೆ ತಿಳಿಯದೆ ಇದ್ದ ಗುಣಗಳ ಅನಂತತೆಯನ್ನೇ ಹೊಸದಾಗಿ ನೋಡುತ್ತಾ ಆಶ್ಚರ್ಯಮಗ್ನಳಾಗುತ್ತಾಳೆ. ಪರಮಾತ್ಮನ

ಒಂದು ಕಿರುಬೆರಳಿನ ಗುಣಗಳು ಅನಂತ ಎಂಬ ವಿಷಯವೂ ಲಕ್ಷ್ಮಿಯ ಸಾಕ್ಷಾತ್ಕಾರಕ್ಕೆ 'ಅನಂತ' ಎಂಬುದಾಗಿ ಹೊಸಹೊಸ ಅನಂತತೆಯೊಂದಿಗೆ ಗೋಚರವಾಗುತ್ತದೆ. ಇಂತಹ ಅಚಿಂತ್ಯಗುಣಗಳಿಂದ ಅದ್ಭುತನು ಪರಮಾತ್ಮನು ಎಂದು ಲಕ್ಷ್ಮೀಸಹಿತನಾದ ಪರಮಾತ್ಮನ ಮಹಿಮೆಯನ್ನು ಹೊಗಳಿದ್ದಾರೆ.

**ಚಕ್ಷಾಣಾ ಸೌಕ್ಷ್ಮ್ಯಯೋಗಾದ್ಯುಗಪದಗಣಿತಾನೀಕ್ಷಿತುಂ ದಕ್ಷಿಣಾಕ್ಷೀ**
**ಪಶ್ಯತ್ಯದ್ಯಾಪಿ ನಾಂತಂ ನಯನಹೃದಯಯೋರ್ಹಾರಿಣಾಂ ಹಂತ ನೋಽಘಮ್ ।**
**ಕಾಲಾದಸ್ಮಾದನಾದೇರ್ನಚ ಕಿಲ ಕಲಯಿಷ್ಯತ್ಯನಂತಾಚ್ಚ ಹಂತ**
**ಸ್ವಾಂತಃಸಂತೋಷಣೀ ಯಾ ನಿಖಿಲಗುಣಲಯೇಷೂನ್ಮಿಷಂತೀ ಪರಾಂತೇ ॥೫॥**

**ವ್ಯಾಖ್ಯಾನ–** ತತ್ತತ್ ಕಾಲೇ ನವನವಸುವಿಶೇಷಂ ಉಪಲಭ್ಯಮಾನಾ ಲಕ್ಷ್ಮೀಃ ಕಸ್ಮಿಂಶ್ಚಿತ್ ಕಾಲೇ ಸರ್ವಾನಪಿ ಭಗವನ್ನಖಗತಾನ್ ವಿಶೇಷಾನ್ ಉಪಲಭತೇ ಕಿಂ ಇತ್ಯಾ–ಕಾಂಕ್ಷಾಯಾಂ ನೇತ್ಯಾಹ — **ಚಕ್ಷಾಣೇತಿ ॥** ಪರಾಂತೇ ಪರಸ್ಯ ಬ್ರಹ್ಮಣಃ ಆಯುಷಃ ಅಂತೇ ಅವಸಾನೇ, ನಿಖಿಲಗುಣಲಯೇಷು ನಿಖಿಲಾನಾಂ ಸತ್ತ್ವಾದಿಗುಣಾನಾಂ ಲಯೇಷು ನಾಶೇಷು, ಅಥವಾ ಗುಣಾನಾಂ ಅಪ್ರಧಾನಾನಾಂ ಬ್ರಹ್ಮಾದೀನಾಂ ಲಯೇಷು, ಬಹುವಚನಾತ್ ಅನಂತಬ್ರಹ್ಮಕಲ್ಪೇಷು ಇತ್ಯರ್ಥಃ, ಉನ್ಮಿಷಂತೀ ಜಾಗ್ರತೀ, ಪ್ರಲಯೇಽಪಿ ಅಲುಪ್ತಜ್ಞಾನಾ ಇತ್ಯರ್ಥಃ, ಸ್ವಾಂತಃಸಂತೋಷಣೀಯಾ, ಸಂತೋಷಣೀಯಂ ಸಂತೋಷಃ, ಅಕರ್ಮಕಾತ್ ತುಷೇರ್ಭಾವೇ ಅನೀಯರ್, ಸ್ವಸ್ಯ ಅಂತಃ ಸಂತೋಷಣೀಯಂ ಸಂತೋಷಃ ಯಸ್ಯಾಃ ಸಾ, ಪ್ರಲಯೇಽಪಿ ಆನಂದೋದ್ರಿಕ್ತೇತ್ಯರ್ಥಃ । **ಅಥವಾ** ಸಂತೋಷಣೀಯಾಃ ಸಂತೋಷಯಿತುಂ ಯೋಗ್ಯಾಃ, ಣಿಜಂತಾತ್ ತುಷೇಃ ಕರ್ಮಣಿ ಅನೀಯರ್ । ಉತ್ತರಕಲ್ಪೇ ಆನಂದ–ಮನುಭೋಕ್ಷ್ಯಮಾಣಾಃ ಮುಕ್ತಿಯೋಗ್ಯಾಃ ಇತಿ ಯಾವತ್ । ಮುಕ್ತಾಸ್ತು ತೋಷವಂತಃ ಇತ್ಯುಚ್ಯಂತೇ, ನತು ತೋಷಣೀಯಾಃ ಇತಿ । ಸ್ವಾಂತಃ ಸ್ವೋದರೇ ತೋಷಣೀಯಾಃ ಕಲ್ಪಾಂತೇ ಮೋಕ್ಷ್ಯಮಾಣಾಃ ಸಂಸಾರಿಣಃ ಯಸ್ಯಾಂ ಸಾ । ಯದ್ಯಪಿ ಪ್ರಲಯೇ ಪರಮಾತ್ಮೋದರೇಽಪಿ ಮುಕ್ತಿಯೋಗ್ಯಾಃ ಪ್ರವಿಷ್ಟಾ ಭವಂತಿ, ತಥಾಪಿ ನ ತೋಷಣೀಯಾಃ, ಕಿಂತು ಲಿಂಗಭಂಗವತ್ತ್ವೇನ ತೋಷವಂತ ಏವ । ತೋಷಣೀಯಾಸ್ತು ಪ್ರಲಯೇ ಲಕ್ಷ್ಮ್ಯುದರೇ ಪ್ರವಿಷ್ಟಾ ಭವಂತಿ । ತಥಾಚ ಸೌಪರ್ಣಶ್ರುತಿಃ —'ಸಮಾವೇತೌ

ಪ್ರಕೃತಿಶ್ಚ ಪರಮಶ್ಚ ನಿತ್ಯೌ ಸರ್ವಗತೌ ನಿತ್ಯಮುಕ್ತೌ, ಅಸಮಾವೇತೌ ಪ್ರಕೃತಿಶ್ಚ ಪರಮಶ್ಚ ವಿಲೀನೋ ಹಿ ಪ್ರಕೃತೌ ಸಂಸಾರಮೇತಿ, ವಿಲೀನಃ ಪರಮೇ ಹ್ಯಮೃತತ್ವಮೇತಿ' ಇತಿ । 'ಸ್ವಾಂತಃಸಂತೋಷಿಣೀ ಯಾ' ಇತಿಪಾಠೇ, ಸ್ವಾಂತಃ ಸಂತೋಷಃ ಅಸ್ಯಾಃ ಅಸ್ತೀತಿ ಸ್ವಾಂತಃಸಂತೋಷಿಣೀ, ಯಾ ಇತಿ ಪೃಥಕ್ ಪದಂ, ಸೌಕ್ಷ್ಮ್ಯಯೋಗಾತ್ ಸೌಕ್ಷ್ಮ್ಯಂ ಬಹುವಿಷಯಕತ್ವಲಕ್ಷಣಃ ಜ್ಞಾನಗತೋ ವಿಶೇಷಃ, ಏತೇಷಾಂ ಜ್ಞಾನಂ ಸೂಕ್ಷ್ಮಂ ಇತ್ಯಾದಿ ಪ್ರಯೋಗೇ ತಥಾ ದರ್ಶನಾತ್, ತಸ್ಯ ಯೋಗಾತ್ ಸಂಬಂಧಾತ್, ಯುಗಪತ್ ಏಕಸ್ಮಿನ್ ಕಾಲೇ, ಅಗಣಿತಾನಿ ಅಸಂಖ್ಯಾನಿ, ಪೂರ್ವಶ್ಲೋಕಾತ್ ಗುಣಾನಾಂ ಆನಂತ್ಯಾನಿ ಇತ್ಯನುವರ್ತತೇ, ಪದಕಮಲಕನಿಷ್ಠಾಂಗುಲೀಸನ್ನಖಸ್ಯ ಗುಣಾನಾಂ ಆನಂತ್ಯಾನಿ ಈಕ್ಷಿತುಂ ಸಾಕ್ಷಾತ್ಕರ್ತುಂ ದಕ್ಷಿಣಾಕ್ಷೀ ದಕ್ಷಿಣೇ ಕುಶಲೇ ಅಕ್ಷಿಣೀ ಯಸ್ಯಾಃ ಸಾ ತಥಾ-ವಿಧಾ ಲಕ್ಷ್ಮೀಃ ಚಕ್ಷಾಣಾ ಗುಣಾನಂತ್ಯಾನಿ ನಿತ್ಯಂ ಪಶ್ಯಂತೀ ಸತೀ ಅಸ್ಮಾತ್ ಅನಾದೇಃ ಕಾಲಾತ್ ಅನಾದಿಕಾಲೇ ಚ ನಯನಹೃದಯಯೋಃ ಹಾರಿಣಾಂ ಗುಣಾನಾಂ ಇತ್ಯನುವರ್ತತೇ, ಲೋಚನಮನೋಹಾರಿಣಾಂ, ಪದಕಮಲಕನಿಷ್ಠಾಂಗುಲೀಸನ್ನಖಸ್ಯ ಗುಣಾನಾಂ ಅಂತಂ ಅದ್ಯಾಪಿ ನ ಪಶ್ಯತಿ । ಹಾರಿಣಾಂ ಇತಿ, ಬಹುಲಮಾಭೀಕ್ಷ್ಣ್ಯೇ (೩-೨-೮೧) ಇತಿ ಬಹುಲಗ್ರಹಣಾತ್ ಸುಪ್ಯನುಪಪದೇಽಪಿ ಆಭೀಕ್ಷ್ಣ್ಯೇ ಣಿನಿಃ, ಅನಂತಾಚ್ಚ ಕಾಲಾತ್ ಅನಂತೇಽಪಿ ಕಾಲೇ ಗುಣಾನಾಂ ಅಂತಂ ನ ಕಲಯಿಷ್ಯತಿ ಚ ಕಿಲ, ನ ಜ್ಞಾಸ್ಯತಿ ಚ ಕಿಲ । ಕಿಲೇತಿ ಪ್ರಸಿದ್ಧೌ । ಅನಾದಿಕಾಲೇ ಗುಣಾನ್ ಪಶ್ಯಂತೀ ಏತದ್ವರ್ತಮಾನಕಾಲಪರ್ಯಂತಂ ತೇಷಾಮಂತಂ ನ ಜ್ಞಾತವತೀ, ಏತತ್ ಕಾಲಮಾರಭ್ಯ ಉತ್ತರತ್ರಾಪಿ ಗುಣಾನಾಮಂತಂ ನ ಜ್ಞಾಸ್ಯತೀತ್ಯರ್ಥಃ । ಅನಾದೇಃ ಕಾಲಾತ್ ಅನಂತಾಚ್ಚ ಕಾಲಾತ್ ಇತ್ಯತ್ರ "ಸಪ್ತಮೀಪಂಚಮ್ಯೌ ಕಾರಕಮಧ್ಯೇ"(೨-೩-೭) ಇತಿ ಪಂಚಮೀ । ಸಾ ಲಕ್ಷ್ಮೀಃ ನಃ ಅಸ್ಮಾಕಂ ಅಘಂ ಪಾಪಂ ಹಂತು ನಾಶಯತು । 'ಹನ ಹಿಂಸಾಗತ್ಯೋಃ' ಇತ್ಯಸ್ಮಾತ್ ಧಾತೋಃ ಕರ್ತರಿ ಲೋಟ್ । ಅತ್ರ ಯುಗಪದಗಣಿತಗುಣಾವಗಾಹನ-ಸಾಮರ್ಥ್ಯಾದಿಕಾರಣಸತ್ವೇಽಪಿ ಸಾಮಸ್ತ್ಯೇನ ಕನಿಷ್ಠಾಂಗುಲೀನಖಗುಣಜ್ಞಾನಲಕ್ಷಣ-ಕಾರ್ಯಾನುದಯಾತ್ ವಿಶೇಷೋಕ್ತಿರಲಂಕಾರಃ । ವಿಶೇಷೋಕ್ತಿರಖಂಡೇಷು ಕಾರಣೇಷು ಫಲಾವಚಃ ಇತಿ ತಲ್ಲಕ್ಷಣಾತ್ ॥೫॥

**ಅನ್ವಯ** — (ಯಾ) ಪರಾಂತೇ, ನಿಖಿಲಗುಣಲಯೇಷು ಉನ್ಮಿಷಂತೀ ಸ್ವಾಂತಃ ಸಂತೋಷಣೀಯಾ, (ಯಾಃ ಸ್ವಾಂತಃ ಸಂತೋಷಿಣೀ) ಸೌಕ್ಷ್ಮ್ಯಯೋಗಾತ್ ಯುಗಪತ್

ಅಗಣಿತಾನಿ ಪದಕಮಲಕನಿಷ್ಠಾಂಗುಲೀಸನ್ನಖಸ್ಯ ನಯನಹೃದಯಯೋಃ ಹಾರಿಣಾಂ ಗುಣಾನಾಂ ಆನಂತ್ಯಾನಿ ಈಕ್ಷಿತುಂ ದಕ್ಷಿಣಾಕ್ಷೀ (ಯಾ ಲಕ್ಷ್ಮೀಃ) (ಗುಣಾನಾಂ ಆನಂತ್ಯಾನಿ) ಚಕ್ಷಾಣಾ ಅಸ್ಮಾತ್ ಅನಾದೇಃ ಅನಂತಾಚ್ಚ ಕಾಲಾತ್ ಅದ್ಯಾಪಿ (ಗುಣಾನಾಂ) ಅಂತಂ ನ ಪಶ್ಯತಿ, ನ ಕಲಯಿಷ್ಯತಿ ಚ ಕಿಲ ಹಂತ (ಸಾ ಲಕ್ಷ್ಮೀಃ) ನಃ ಅಘಂ ಹಂತು ।

**ಅನುವಾದ**— ಪರಾಂತೇ = ಬ್ರಹ್ಮದೇವರ ಆಯುಸ್ಸಿನ ಕೊನೆಯಲ್ಲಿ, ನಿಖಿಲ = ಎಲ್ಲಾ, **ಗುಣ** = ಸತ್ತ್ವಾದಿಗುಣಗಳ, **ಲಯೇಷು** (ಸತ್ಸು) = ನಾಶವಾದಾಗ, (ಗುಣಃ= ಅಪ್ರಧಾನರಾದ ಬ್ರಹ್ಮಾದಿಗಳ, **ಲಯೇಷು** = ಲಯಗಳಲ್ಲಿ, ಅನಂತಬ್ರಹ್ಮಕಲ್ಪಗಳಲ್ಲಿ) **ಉನ್ಮಿಷಂತೀ** = ಜ್ಞಾನಲೋಪವಿಲ್ಲದಿರುವ, **ಸ್ವಾಂತಃಸಂತೋಷಣೀಯಾ** = ತನ್ನ ಸ್ವರೂಪಭೂತವಾದ ಅಂತಃಕರಣದಲ್ಲಿ ಆನಂದೋದ್ರೇಕವುಳ್ಳ (ತನ್ನ ಉದರದಲ್ಲಿ ಮುಂದೆ ಮೋಕ್ಷಾನಂದವನ್ನು ಅನುಭವಿಸಲಿರುವ ಮುಕ್ತಿಯೋಗ್ಯಜೀವರುಳ್ಳ) (ಸ್ವಾಂತಃ-ಸಂತೋಷಣೀಯಾ, ಎಂಬ ಪಾಠದಲ್ಲಿ ಸ್ವಾಂತಃ = ತನ್ನ ಅಂತಃಕರಣದಲ್ಲಿ, **ಸಂತೋಷಿಣೀ** = ಸಂತೋಷವುಳ್ಳ, ಯಾ = ಯಾವ ಲಕ್ಷ್ಮಿಯು) **ಸೌಕ್ಷ್ಮ್ಯಯೋಗಾತ್** = ಬಹುವಿಷಯ-ಗಳನ್ನು ಒಳಗೊಂಡಿರುವಿಕೆ ಎಂಬ ಜ್ಞಾನದ ಸೂಕ್ಷ್ಮತೆಯ ಸಂಬಂಧವಿರುವುದರಿಂದ, **ಯುಗಪತ್** = ಒಂದೇ ಸಮಯದಲ್ಲಿ, **ಪದಕಮಲ** = ಕಮಲದಂತಿರುವ ಪಾದದ, **ಕನಿಷ್ಠಾಂಗುಲೀ** = ಕಿರುಬೆರಳಿನ, **ಸನ್ನಖಸ್ಯ** = ನಿರ್ದೋಷವಾದ ಉಗುರಿನ, **ನಯನ-ಹೃದಯಯೋಃ** = ಕಣ್ಣು ಮತ್ತು ಮನಸ್ಸುಗಳಿಗೆ, **ಹಾರಿಣಾಂ** = ಆಕರ್ಷಕವಾದ, (**ಗುಣಾನಾಂ**= ಗುಣಗಳ) **ಅಗಣಿತಾನಿ** = ಲೆಕ್ಕವಿಲ್ಲದ, **ಆನಂತ್ಯಾನಿ** = ಅಸಂಖ್ಯತೆಗಳನ್ನು, **ಈಕ್ಷಿತುಂ** = ನೋಡುವುದಕ್ಕೆ, **ದಕ್ಷಿಣಾಕ್ಷೀ** = ಸಮರ್ಥವಾದ ಕಣ್ಣುಗಳುಳ್ಳ, (**ಯಾ** = ಯಾವ, **ಲಕ್ಷ್ಮೀಃ** = ಲಕ್ಷ್ಮೀದೇವಿಯು) (ಗುಣಾನಂತ್ಯಾನಿ) **ಚಕ್ಷಾಣಾ** = ಆ ಗುಣಗಳ ಅನಂತತೆಯನ್ನು ನೋಡುತ್ತಿದ್ದರೂ, **ಅಸ್ಮಾತ್** = ಈ, **ಅನಾದೇಃ** = ಅನಾದಿಯಾದ, **ಅನಂತಾತ್ ಚ** = ಮತ್ತೂ ಅನಂತವಾದ, **ಕಾಲಾತ್** = ಕಾಲದಲ್ಲಿಯೂ, **ಅದ್ಯಾಪಿ** = ಇಂದಿಗೂ ಕೂಡ, **ಅಂತಂ** = ಕೊನೆಯನ್ನು, **ನ ಪಶ್ಯತಿ** = ನೋಡುತ್ತಿಲ್ಲ. (ಮುಂದಿನ ಕಾಲದಲ್ಲಿಯೂ), **ನ ಕಲಯಿಷ್ಯತಿ ಚ ಕಿಲ** = ನೋಡುವುದೂ ಇಲ್ಲ. **ಹಂತ** = ಅಹಾ, **ಸಾ ಲಕ್ಷ್ಮೀಃ** = ಅಂತಹ ಲಕ್ಷ್ಮಿಯು, **ನಃ** = ನಮ್ಮ, **ಅಘಂ** = ಪಾಪವನ್ನು, **ಹಂತು** = ನಾಶಮಾಡಲಿ ॥ ೫ ॥

**ತಾತ್ಪರ್ಯ**— ಆಯಾ ಕಾಲದಲ್ಲಿ ಹೊಸಹೊಸದಾದ ಗುಣವಿಶೇಷಗಳನ್ನು ನೋಡುತ್ತಿರುವ ಲಕ್ಷ್ಮಿಯು ಮುಂಬರುವ ಯಾವುದೋ ಒಂದು ಕಾಲದಲ್ಲಿ ಪರಮಾತ್ಮನ ಉಗುರಿನ ಎಲ್ಲಾ ವಿಶೇಷಗಳನ್ನೂ ನೋಡಿಯೇ ಬಿಡುವಳಲ್ಲವೇ ಎಂಬ ಸಂದೇಹ ಬಂದರೆ ಇಲ್ಲವೆಂದು ಹೇಳುತ್ತಾರೆ. ಬ್ರಹ್ಮದೇವರ ದ್ವಿಪರಾರ್ಧವೆಂಬ ಆಯುಸ್ಸು ಮುಗಿದಾಗ ಸತ್ತ್ವಾದಿಗುಣಗಳ ಸಾಮ್ಯಾವಸ್ಥೆಯೆಂಬ ಮಹಾಪ್ರಲಯವು ಉಂಟಾಗುತ್ತದೆ. ಬ್ರಹ್ಮಾದಿ-ಗಳೆಲ್ಲರೂ ಲಯ ಹೊಂದುವ ಇಂತಹ ಅನಂತಬ್ರಹ್ಮಕಲ್ಪಗಳಲ್ಲಿಯೂ ಪ್ರಲಯಗಳಲ್ಲಿ ಲಕ್ಷ್ಮೀದೇವಿಯ ಜ್ಞಾನಕ್ಕೆ ಲೋಪವಿರುವುದಿಲ್ಲ. ಅವಳು ಜಾಗ್ರತಳಾಗಿರುತ್ತಾಳೆ. ತನ್ನ ಸ್ವರೂಪಭೂತವಾದ ಅಂತಃಕರಣದಲ್ಲಿ ನಿರಂತರವಾಗಿ ತನ್ನ ಪತಿಯ ದರ್ಶನದಿಂದ ಆನಂದೋದ್ರೇಕವನ್ನು ಹೊಂದಿರುತ್ತಾಳೆ. ಮುಂದಿನ ಕಲ್ಪದ ಕೊನೆಯಲ್ಲಿ ಮೋಕ್ಷ ಹೊಂದಿ ಆನಂದಾನುಭವ ಮಾಡಲಿರುವ ಸಾತ್ತ್ವಿಕಜೀವರನ್ನು ತನ್ನ ಉದರದಲ್ಲಿ ಇಟ್ಟು-ಕೊಂಡಿರುತ್ತಾಳೆ. ಅವಳ ಜ್ಞಾನವು ಅನೇಕಾನೇಕ ವಿಷಯಗಳನ್ನು ಒಳಗೊಂಡು ಅತ್ಯಂತ-ಸೂಕ್ಷ್ಮವಾಗಿರುವುದರಿಂದ ಪರಮಾತ್ಮನ ಪಾದಕಮಲದ ಒಂದು ಕಿರುಬೆರಳಿನ ನಿರ್ದೋಷವಾದ ಉಗುರಿನ ಅಸಂಖ್ಯವಾದ ಗುಣಗಳ ಆನಂತ್ಯವನ್ನು ಸಾಕ್ಷಾತ್ಕರಿಸಲು ಅವಳು ಸಮರ್ಥಳು. ಅವಳ ನಯನಗಳಲ್ಲಿ ಅಂತಹ ಸ್ವರೂಪಸಾಮರ್ಥ್ಯವಿದೆ. ಅಂತಹ ಲಕ್ಷ್ಮಿಯು ಮನೋನಯನಗಳಿಗೆ ಸಂತೋಷಪ್ರದವಾದ ಪರಮಾತ್ಮನ ನಖದ ಗುಣಗಳ ಆನಂತ್ಯಗಳನ್ನು ಅನಾದಿಕಾಲದಿಂದ ನೋಡುತ್ತಿದ್ದರೂ ಕೊನೆ ಮುಟ್ಟುವುದಿಲ್ಲ. ಮುಂದೆ ಬರುವ ಅನಂತವಾದ ಒಂದು ಅವಯವದ ಗುಣಗಳ ಕೊನೆಯನ್ನು ಮುಟ್ಟದಿದ್ದರೂ ನಿರಂತರ ಗುಣಗಣನೆಯಲ್ಲಿ ಆಸಕ್ತಳಾದ ಆ ಮಹಾಲಕ್ಷ್ಮೀದೇವಿಯು ನಮ್ಮಪಾಪಗಳನ್ನು ನಾಶಮಾಡಲಿ.

**ವೇತ್ತಾ ವಕ್ತಾ ವಿವೇಕ್ತಾ ವಿವಿಧಗುಣಗಣಾಪೂರ್ಣಮೇಕೈಕಮೇಷಾಂ**
**ಕೋ ವಾ ಕಾರ್ತ್ಸ್ನ್ಯಾತ್ ಕವೀಂದ್ರಃ ಕ ಇವ ಚ ಕಲಯೋಕ್ತ ಕ್ರಮೋನ್ನೇಯಕಾನಿ ।**
**ಅಂಗಾನ್ಯಂಗೀಕರಿಷ್ಣುರ್ಮನಸಿ ವಚಸಿ ವಾ ಯೋ ಹಿ ಕಲ್ಪಾಂತಕಾಲ**
**ಕ್ರಾಂತಾಂಡೋಲ್ಲೋಲಕಲ್ಲೋಲಿನಿ ಸಲಿಲನಿಧೌ ಸಜ್ಜತೇ ಮಜ್ಜನಾಯ ॥೬॥**

**ವ್ಯಾಖ್ಯಾನ**—ತಸ್ಮಾತ್ ಭಗವನ್ನಖಾದ್ಯಂಗಾನಾಂ ಸಾಕಲ್ಯೇನ ಜ್ಞಾತಾ ಕೋಽಪಿ ನಾಸ್ತಿ ಇತಿ ಉಪಸಂಹರತಿ — **ವೇತ್ತೇತಿ ॥** ಕೋ ವಾ ಕವೀಂದ್ರಃ ಜ್ಞಾನಿಶ್ರೇಷ್ಠಃ ಏಷಾಂ ಪ್ರಕೃತಾನಾಂ ಭಗವನ್ನಖಾದ್ಯಂಗಗುಣಾನಂತ್ಯಾನಾಂ ಮಧ್ಯೇ, ಅಥವಾ ಆನಂತ್ಯ-ಪ್ರತಿಯೋಗಿತ್ವೇನ ಪ್ರಕೃತಭಗವದ್ಗುಣಾನಾಂ ಮಧ್ಯೇ, ತಸ್ಮಿನ್ ಪಕ್ಷೇ ಏಕೈಕಂ ಇತ್ಯೇತದ್ ಗುಣಪರಮೇವ, ವಿವಿಧಗುಣಗಣಾಪೂರ್ಣಂ ನಾನಾಪ್ರಕಾರಗುಣಸಮುದಾಯ-ಪೂರ್ಣಂ ಏಕೈಕಂ ಅಂಗಗುಣಾನಂತ್ಯಂ, ಮಯ್ಯನಂತಗುಣೇಽನಂತೇ ಗುಣತೋಽ-ನಂತವಿಗ್ರಹೇ ಇತ್ಯುಕ್ತೇಃ ಏಕೈಕಗುಣಸ್ಯಾಪಿ ಆನಂತ್ಯಮಿತಿ ದ್ರಷ್ಟವ್ಯಂ, ಕಾರ್ತ್ಸ್ನ್ಯೇನ ಸಾಕಲ್ಯೇನ ವೇತ್ತಾ ವಕ್ತಾ ವಿವೇಕ್ತಾ ಕೋಽಪಿ ಕವೀಂದ್ರಃ ನಾಸ್ತೀತ್ಯರ್ಥಃ । ಕಲಯಾ ಚ ಅಂಶೇನಾಪಿ ಏಕೈಕಂ ಅಂಗಗುಣಾನಂತ್ಯಂ ವೇತ್ತಾ ವಕ್ತಾ ವಿವೇಕ್ತಾ ಚ ಕ ಇವ ಕ ಏವ, ನ ಕೋಽಪಿ ಇತ್ಯರ್ಥಃ । ಏಕೈಕಮಿತ್ಯತ್ರ 'ಕರ್ತೃಕರ್ಮಣೋಃ ಕೃತಿ' (೨-೩-೬೫) ಇತಿ ಪ್ರಾಪ್ತಾಯಾಃ ಷಷ್ಠ್ಯಾಃ ನ ಲೋಕಾವ್ಯಯನಿಷ್ಠಾಖಲರ್ಥತೃನಾಂ(೨-೩-೬೯) ಇತಿ ನಿಷೇಧಾತ್ ಕರ್ಮಣಿ ದ್ವಿತೀಯಾ, ತಸ್ಮಾದ್ ಉಕ್ತಕ್ರಮೋನ್ನೇಯಕಾನಿ ಉಕ್ತೇನ ಲಕ್ಷ್ಮೀರಕ್ಷೀಣದೀಕ್ಷೇತ್ಯಾದಿನಾ ಉಕ್ತೇನ ಕ್ರಮೇಣ ಲಕ್ಷ್ಯಾತ್ಯೃಪ್ಯಜ್ಞೇಯಗುಣಾನಂತ್ಯ-ವತ್ತ್ವೇನ ಪ್ರಕಾರೇಣ, ತಾದೃಶಶಕ್ತಿಮತ್ತ್ವೇನ ವಾ, ಉನ್ನೇಯಾನ್ಯೇವ ಉನ್ನೇಯಕಾನಿ ಸ್ವಾರ್ಥೇ ಕಪ್ರತ್ಯಯಃ, ಜ್ಞಾತವ್ಯಾನಿ, ಶಕ್ತೌ ಚರಣವಿಕ್ಷೇಪೇ ಪರಿಪಾಟ್ಯಾಮಪಿ ಕ್ರಮಃ ಇತಿ ನಾನಾರ್ಥರತ್ನಮಾಲಾ, ಪರಿಪಾಟೀ ಪ್ರಕಾರಃ, ಅಂಗಾನಿ ಶ್ರೀವಿಷ್ಣುಕನಿಷ್ಠಾಂಗುಲೀ-ಸನ್ನಖಾದ್ಯಂಗಾನಿ ಯಃ ಮನಸಿ ವಚಸಿ ವಾ ಅಂಗೀಕರಿಷ್ಣುಃ, ಮನೋವಿಷಯತ್ವೇನ ವಚೋವಿಷಯತ್ವೇನ ವಾ ಅಂಗೀಕರ್ತಾ, ಲಕ್ಷ್ಯಾತ್ಯೃಪ್ಯಜ್ಞೇಯಗುಣಾನಂತ್ಯವಂತಿ ಶ್ರೀವಿಷ್ಣುನಖಾದ್ಯಂಗಾನಿ ಮನಸಾ ಜ್ಞಾಸ್ಯಾಮಿ ಇತಿ, ವಚಸಾ ವ್ಯಾಹರಿಷ್ಯಾಮಿ ಇತಿ ವಾ, ಯಃ ಸಂಕಲ್ಪಂ ಕುರುತೇ ಇತ್ಯರ್ಥಃ, ಸಃ **ಕಲ್ಪಾಂತಕಾಲಕ್ರಾಂತಾಂಡೋಲ್ಲೋಲ-ಕಲ್ಲೋಲಿನಿ**, ಕಲ್ಪಾಂತಕಾಲೇ ಪ್ರಲಯಕಾಲೇ, ಕ್ರಾಂತಂ ಆಕ್ರಾಂತಂ ಅಂಡಂ ಬ್ರಹ್ಮಾಂಡಂ ಯೇನ ಸಃ ಕಲ್ಪಾಂತಕಾಲಕ್ರಾಂತಾಂಡಃ, ಉಲ್ಲೋಲಾಃ ಉತ್ಕರ್ಷೇಣ ಚಂಚಲಾಃ ಕಲ್ಲೋಲಾಃ ತರಂಗಾಃ ಅಸ್ಯ ಸಂತೀತಿ ಉಲ್ಲೋಲಕಲ್ಲೋಲೀ, ಕಲ್ಪಾಂತಕಾಲ-ಕ್ರಾಂತಾಂಡಶ್ಚಾಸೌ ಉಲ್ಲೋಲಕಲ್ಲೋಲೀ ಚ ಕಲ್ಪಾಂತಕಾಲಕ್ರಾಂತಾಂಡೋಲ್ಲೋಲ-ಕಲ್ಲೋಲೀ ತಸ್ಮಿನ್, ಸಲಿಲನಿಧೌ ಸಮುದ್ರೇ ಮಜ್ಜನಾಯ ಅವಗಾಹನಂ ಕರ್ತುಂ 'ಕ್ರಿಯಾರ್ಥೋಪಪದಸ್ಯ ಚ ಕರ್ಮಣಿ ಸ್ಥಾನಿನಃ' (೨-೩-೧೪) ಇತಿ ಚತುರ್ಥೀ, ಅಥವಾ

ತಾದರ್ಥ್ಯೇ ವಾ ಚತುರ್ಥೀ, ಮಜ್ಜನಾರ್ಥಂ ಇತ್ಯರ್ಥಃ, ಸಜ್ಜತೇ ಗಚ್ಛತಿ । 'ಷಸ್ಜಗತೌ' ಇತ್ಯಸ್ಮಾದ್ ಧಾತೋಃ ಕರ್ತರಿ ಲಟ್. ಆದ್ಯಷಕಾರಸ್ಯ 'ಧಾತ್ವಾದೇಃ ಷಃ ಸಃ' (೬-೧-೬೪) ಇತಿ ಸಕಾರೇ ದ್ವಿತೀಯಸಕಾರಸ್ಯ ಶ್ಚುತ್ವೇನ ಶಕಾರೇ ತಸ್ಯ ಜಶ್ತ್ವೇನ ಜಕಾರೇ 'ಸಜ್ಜತೇ' ಇತಿರೂಪಂ ದ್ರಷ್ಟವ್ಯಂ । ಯದ್ಯಪ್ಯಯಂ ಪಾಣಿನ್ಯಾಚಾರ್ಯೇಣ ಪರಸ್ಮೈಪದಿಷು ಪಠಿತಃ, ಬೋಪದೇವೇನಾಪಿ ಷಸ್ಜ ತರ್ಪಣ ಇತಿ ಪಠಿತ್ವಾ 'ಸಜ್ಜತಿ' ಇತಿ ಪರಸ್ಮೈಪದೀ ಏವ ಉದಾಹೃತಃ, ತಥಾಪಿ 'ಹೇತುಮತಿ ಚ' ಇತಿ ಸೂತ್ರೇ ಭಾಷ್ಯೇ 'ಪದೇ ಪ್ರಾಪ್ತೇ ಸುಸಜ್ಜತೇ' ಇತಿ ಆತ್ಮನೇಪದಪ್ರಯೋಗಾತ್ ಆತ್ಮನೇಪದಂ ಸಾಧು ಇತಿ ಬೋಧ್ಯಮ್ । ಯಥಾ ಪ್ರಳಯಸಮುದ್ರಾವಗಾಹನಾಯ ಗಮನಂ ಪರಿಹಾಸ-ವಿಷಯೋ ಭವತಿ ತಥಾ ಲಕ್ಷ್ಮ್ಯಾದ್ಯಜ್ಞೇಯಗುಣಾನಂತ್ಯವದ್ಭಗವತ್ಪಾದಕಮಲ-ಕನಿಷ್ಠಾಂಗುಲೀಸನ್ನಖಾದ್ಯಂಗಾನಾಂ ಮನಸಾ ಜ್ಞಾನಸಂಕಲ್ಪಃ ವಚಸಾ ವ್ಯವಹಾರಸಂಕಲ್ಪಶ್ಚ ಪರಿಹಾಸವಿಷಯಃ ಇತಿ ಉಪಮಾಯಾಂ ಪರ್ಯವಸಾನಾತ್ ನಿದರ್ಶನಾಲಂಕಾರಃ । ನಿದರ್ಶನಾ । ಅಭವದ್ವಸ್ತುಸಂಬಂಧಃ ಉಪಮಾಪರಿಕಲ್ಪಕಃ ಇತಿ ಲಕ್ಷಣಾತ್ ॥ ೬ ॥

**ಅನ್ವಯ**— ಏಷಾಂ (ಮಧ್ಯೇ) ವಿವಿಧಗುಣಗಣಾಪೂರ್ಣಂ ಏಕೈಕಂ ಕಾರ್ತ್ಸ್ನ್ಯಾತ್ ವೇತ್ತಾ, ವಕ್ತಾ ವಿವೇಕ್ತಾ ಕೋ ವಾ ಕವೀಂದ್ರಃ ? ಕಲಯಾ ವೇತ್ತಾ ವಕ್ತಾ ವಿವೇಕ್ತಾ ಚ ಕ ಇವ ? ಉಕ್ತಕ್ರಮೋನ್ನೇಯಕಾನಿ ಅಂಗಾನಿ ಮನಸಿ ವಚಸಿ ವಾ ಅಂಗೀ-ಕರಿಷ್ಣುಃ ಯಃ (ಸಃ) ಕಲ್ಪಾಂತಕಾಲಕ್ರಾಂತಾಂಡೋಲ್ಲೋಲಕಲ್ಲೋಲಿನಿ ಸಲಿಲನಿಧೌ ಮಜ್ಜನಾಯ ಸಜ್ಜತೇ ಹಿ ॥

**ತಾತ್ಪರ್ಯ**— ಏಷಾಂ = (ಮಧ್ಯೇ) ಪರಮಾತ್ಮನ ಉಗುರು ಮೊದಲಾದ ಅಂಗಗಳ ಗುಣಗಳ ಆನಂತ್ಯಗಳ ಮಧ್ಯದಲ್ಲಿ, (ಪರಮಾತ್ಮನ ಗುಣಗಳ ಮಧ್ಯದಲ್ಲಿ) **ವಿವಿಧ-ಗುಣಗಣಾಪೂರ್ಣಂ** = ಅನೇಕಪ್ರಕಾರವಾದ ಗುಣಸಮೂಹದಿಂದ ಪೂರ್ಣವಾದ, **ಏಕೈಕ** = ಒಂದೇ ಒಂದಾದ ಅಂಗಗುಣಗಳ ಆನಂತ್ಯವನ್ನು, (ಒಂದೊಂದು ಗುಣವನ್ನು) **ಕಾರ್ತ್ಸ್ನ್ಯಾತ್** = ಸಂಪೂರ್ಣವಾಗಿ, **ವೇತ್ತಾ** = ತಿಳಿಯುವವನು, **ವಕ್ತಾ** = ಹೇಳುವವನು, **ವಿವೇಕ್ತಾ** = ವಿವೇಚಿಸುವವನು, **ಕೋ ವಾ ಕವೀಂದ್ರಃ (ಅಸ್ತಿ?)** = ಯಾವ ಜ್ಞಾನಿಶ್ರೇಷ್ಠನು ತಾನೇ ಇದ್ದಾನೆ ? (ಯಾವನೂ ಇಲ್ಲ) **ಕಲಯಾ ಚ** = ಒಂದು ಅಂಶದಿಂದಲೂ (ಏಕೈಕಂ

**ಅಂಗಗುಣಾನಂತ್ಯಂ** = ಒಂದೇ ಒಂದಾದ, ಅಂಗಗುಣಗಳ ಆನಂತ್ಯವನ್ನು) **ವೇತ್ತಾ ವಕ್ತಾ ವಿವೇಕ್ತಾ ಚ ಕ ಇವ** = ತಿಳಿಯುವವನು, ಹೇಳುವವನು ವಿವೇಚಿಸುವನು ಯಾವನು ತಾನೇ ಇದ್ದಾನೆ ? (ಯಾವನೂ ಇಲ್ಲ) (ಆದುದರಿಂದ) **ಉಕ್ತಕ್ರಮ** = ಲಕ್ಷ್ಮೀರಕ್ಷೀಣದೀಕ್ಷಾ ಎಂಬಲ್ಲಿ ಹೇಳಿದ ಲಕ್ಷ್ಮೀಯಿಂದಲೂ ತಿಳಿಯಲು ಸಾಧ್ಯವಿಲ್ಲದ ಗುಣಾನಂತ್ಯಪ್ರಕಾರದಿಂದ, **ಉನ್ನೇಯಕಾನಿ** = ತಿಳಿಯಲ್ಪಡಬೇಕಾದ, **ಅಂಗಾನಿ** = ಅಂಗಗಳನ್ನು, **ಮನಸಿ ವಚಸಿ ವಾ** = ಮನಸ್ಸಿನಲ್ಲಿ ಅಥವಾ ಮಾತಿನಲ್ಲಿ, **ಅಂಗೀಕರಿಷ್ಣುಃ ಯಃ** = ಅಂಗೀಕರಿಸುವ ಯಾವನೋ (**ಸಃ** =ಅವನು) **ಕಲ್ಪಾಂತಕಾಲ** = ಪ್ರಳಯಕಾಲದಲ್ಲಿ, **ಕ್ರಾಂತ** = ಆಕ್ರಮಿಸಲ್ಪಟ್ಟ, **ಅಂಡ** = ಬ್ರಹ್ಮಾಂಡವುಳ್ಳ, **ಉಲ್ಲೋಲ** = ಬಹಳ ಚಂಚಲವಾದ, **ಕಲ್ಲೋಲಿನಿ** = ತರಂಗಗಳುಳ್ಳ, **ಸಲಿಲನಿಧೌ** = ಸಮುದ್ರದಲ್ಲಿ, **ಮಜ್ಜನಾಯ** = ಮುಳುಗಿ ಸ್ನಾನಮಾಡಲು, **ಸಜ್ಜತೇ ಹಿ** = ಸನ್ನದ್ಧನಾಗುತ್ತಾನಷ್ಟೇ ?

**ತಾತ್ಪರ್ಯ** — ಹಿಂದೆ ಹೇಳಿದ ಕಾರಣದಿಂದ ಪರಮಾತ್ಮನ ಉಗುರು ಮುಂತಾದ ಅಂಗಗಳನ್ನು ಸಂಪೂರ್ಣವಾಗಿ ತಿಳಿದುಕೊಳ್ಳುವವನು ಇಲ್ಲವೆಂದು ಉಪಸಂಹರಿಸುತ್ತಾರೆ. ಲಕ್ಷ್ಮೀದೇವಿಯೂ ಕೂಡ ಪರಮಾತ್ಮನ ಒಂದು ಅಂಗದ ಸಂಪೂರ್ಣಗುಣಗಳನ್ನು ತಿಳಿಯಲಾರಳೆಂದಮೇಲೆ, ಪರಮಾತ್ಮನ ಉಗುರು ಮುಂತಾದ ಅಂಗಗಳ ಗುಣಗಳ ಅನಂತತೆಗಳಲ್ಲಿ ನಾನಾಪ್ರಕಾರವಾದ ಗುಣಸಮುದಾಯಭರಿತವಾದ ಒಂದು ಅನಂತತೆಯನ್ನಾಗಲೀ, ಪರಮಾತ್ಮನ ಅನಂತಗುಣಗಳಲ್ಲಿ ಅನಂತಗುಣಸಮುದಾಯಭರಿತವಾದ ಒಂದು ಗುಣವನ್ನಾಗಲೀ ಸಂಪೂರ್ಣವಾಗಿ ತಿಳಿಯುವವನು, ತಿಳಿದು ಹೇಳುವವನು, ತಿಳಿದು ಹೇಳಿ ವಿವೇಚಿಸುವವನು, ಯಾವನು ತಾನೇ ಇದ್ದಾನೆ ? ಒಂದು ಅಂಶದಿಂದಾಗಲೀ ಪರಮಾತ್ಮನ ಅಂಗ ಗುಣಗಳ ಆನಂತ್ಯವನ್ನು ತಿಳಿಯುವ, ಹೇಳುವ, ವಿವೇಚಿಸುವ ಪುರುಷನು ಇಲ್ಲವೇ ಇಲ್ಲ. ಪರಮಾತ್ಮನು ತನ್ನ ಗುಣದರ್ಶನದಲ್ಲಿ ಜಾಗ್ರತಳಾಗಿರುವ ಲಕ್ಷ್ಮೀದೇವಿಯ ತಿಳುವಳಿಕೆಗೂ ಬಾರದ ಗುಣಗಳ ಅನಂತತೆಯುಳ್ಳವನು, ಯಾರಿಗೂ ಸಂಪೂರ್ಣವಾಗಿ ಮನಸ್ಸಿಗೆ ಬರಲು ಸಾಧ್ಯವಿಲ್ಲದ ಗುಣಗಳ ಆನಂತ್ಯವನ್ನು ಹೊಂದುವ ಶಕ್ತಿಯುಳ್ಳವನು ಎಂದು ನಾವು ಊಹಿಸಿ ತಿಳಿಯಬೇಕಾಗಿದೆ. ಇಂತಹ ಪರಮಾತ್ಮನ ಒಂದು ಪಾದದ ಕಿರುಬೆರಳಿನ ಉಗುರು ಮುಂತಾದ ನಿರ್ದೋಷವಾದ ಅನಂತಾನಂತ ಅಂಗಗಳ

ಗುಣಗಳ ಅನಂತವಾದ ಅನಂತತೆಗಳನ್ನು ಅನಂತವಾದ ಗುಣಗಳಿಂದ ಭರಿತವಾದ ಒಂದೊಂದು ಅಂಗವನ್ನು, ನಾನು ಮನಸ್ಸಿನಲ್ಲಿ ಗೋಚರಿಸಿಕೊಳ್ಳುತ್ತೇನೆ, ಮಾತಿನಿಂದ ಹೇಳುತ್ತೇನೆ ಎಂದು ಯಾರು ಸಂಕಲ್ಪ ಮಾಡುತ್ತಾನೋ, ಅವನು ಪ್ರಲಯಕಾಲದಲ್ಲಿ ಬ್ರಹ್ಮಾಂಡವನ್ನೇ ಮುಳುಗಿಸಿರುವ ಸಮುದ್ರದಲ್ಲಿ ಭೋರ್ಗರೆಯುವ ಬಲವಾದ ಅಲೆಗಳ ಸದ್ದನ್ನು ಕೇಳುತ್ತಾ ಅಲೆಗಳನ್ನು ನೋಡುತ್ತಾ ಧೈರ್ಯದಿಂದ ಮುಳುಗಿ ಸ್ನಾನಮಾಡಲು ಸಮುದ್ರದಲ್ಲಿ ಇಳಿಯುವ ಮನುಷ್ಯನೇ ಸರಿ. ಪ್ರಳಯಸಮುದ್ರದಲ್ಲಿ ಮುಳುಗಿ ಸ್ನಾನಮಾಡಲು ಹೋಗುವುದು ಹೇಗೆ ಹಾಸ್ಯಾಸ್ಪದವಾಗುತ್ತದೆಯೋ ಅದರಂತೆ ಲಕ್ಷ್ಮೀದೇವಿಗೂ ಸಹ ತಿಳಿಯಲು ಅಶಕ್ಯವಾದ ಗುಣಗಳ ಅನಂತತೆಯುಳ್ಳ ಪರಮಾತ್ಮನ ಒಂದು ಪಾದಕಮಲದ ಕಿರುಬೆರಳಿನ ನಿರ್ದೋಷವಾದ ಉಗುರಿನ ತುದಿ ಮುಂತಾದ ಅಂಗಗಳನ್ನು ಮನಸ್ಸಿನಿಂದ ತಿಳಿಯುತ್ತೇನೆಂದು ಸಂಕಲ್ಪವೂ, ಮಾತಿನಿಂದ ಹೇಳುತ್ತೇನೆ ಎಂಬ ಸಂಕಲ್ಪವೂ ಅಪಹಾಸಕ್ಕೆ ಕಾರಣವಾಗುತ್ತದೆ ಎಂದು ಭಾವ.

**ವಾಗ್ಭಿರ್ವರ್ಯಾಭಿರಗ್ರ್ಯಾಃ ಶ್ರುತಿಪದವಿದಿತಾ ಬ್ರಹ್ಮವಾಯೂ ಸುಪರ್ಣಃ**
**ಶೇಷೇಶಾದ್ಯಾಃ ಸುರೇಶಾಃ ಜನಿಶತವೃತಯಾ ಭಾಗವತ್ಯಾ ಚ ಭಕ್ತ್ಯಾ ।**
**ದೇವ್ಯಾ ದತ್ತಾವಲಂಬಾಃ ಕಥಮಪಿ ಕರುಣಾವಾರಿರಾಶೌ ರಮೇಶೇ**
**ತ್ವಂಶಾಂಶೇ ಸ್ಪ್ರಷ್ಟುಮೀಶಾಃ ತದಿಹ ತದಿತರೇ ಕೇಽನುಕಲ್ಪಾ ವಯಂ ಕೇ ॥೭॥**

**ವ್ಯಾಖ್ಯಾನ–** ನನು ಕಥಂ ತರ್ಹಿ (ಭಕ್ತಾಃ) ಭಗವಂತಂ ಸ್ತುವಂತಿ ಇತ್ಯತಃ ಬಹುಜನ್ಮಸು ಸಾಧನಾನುಷ್ಠಾನೇನ ಮಹಾಲಕ್ಷ್ಮೀಪ್ರಸಾದೇನ ಚ ಕಥಂಚಿದಂಶಾಂಶೇನ ಸ್ತುವಂತಿ ಇತ್ಯಾಹ — **ವಾಗ್ಭಿರಿತಿ** ॥ ಅಗ್ರ್ಯಾಃ ಋಷ್ಯಾದ್ಯುತ್ತಮಾಃ ಶ್ರುತಿಪದವಿದಿತಾಃ ವೇದಪದ್ಯೈಃ ಜ್ಞಾಪಿತಾಃ ವೇದಪ್ರತಿಪಾದ್ಯಾಃ ಇತ್ಯರ್ಥಃ, ಬ್ರಹ್ಮವಾಯೂ, ಬ್ರಹ್ಮಾ ಚ ವಾಯುಶ್ಚ ಬ್ರಹ್ಮ-ವಾಯೂ ಸುಪರ್ಣೋ ಗರುಡಃ ಶೇಷೇಶಾದ್ಯಾಃ ಶೇಷೇಶೌ ಶೇಷರುದ್ರೌ ಆದ್ಯೌ ಯೇಷಾಂ ತೇ, ಸುರೇಶಾಃ ದೇವಶ್ರೇಷ್ಠಾಃ, ಜನಿಶತವೃತಯಾ ಜನ್ಮಶತೇನ ಸಂಪಾದಿ-ತಯಾ ಭಾಗವತ್ಯಾ ಶ್ರೀವಿಷ್ಣುಸಂಬಂಧಿನ್ಯಾ ಭಕ್ತ್ಯಾ, ದೇವ್ಯಾ ಮಹಾಲಕ್ಷ್ಮ್ಯಾ ದತ್ತಾ-ವಲಂಬಾಃ ಸಂತಃ, ದತ್ತಃ ಅವಲಂಬಃ ಹಸ್ತಾವಲಂಬಃ ಯೇಷಾಂ ತೇ ತಾದೃಶಾಃ ಮಹಾಲಕ್ಷ್ಮೀಮಾರಾಧ್ಯ ಸಂಪಾದಿತತತ್ಪ್ರಸಾದಾಃ ಇತ್ಯರ್ಥಃ, ಕರುಣಾವಾರಿರಾಶೌ

ಕೃಪಾಸಮುದ್ರೇ, ರಮೇಶೇ ಲಕ್ಷ್ಮೀಪತೌ **ಅಂಶಾಂಶೇ ತು** ಅಂಶಸ್ಯಾಪಿ ಅಂಶೇ ಭಗವದೇಕಗುಣಸ್ಯ ಲೇಶಸ್ಯ ಲೇಶವಿಷಯೇ ಇತ್ಯರ್ಥಃ, ವರ್ಯಾಭಿಃ ಉತ್ತಮಾಭಿಃ ವಾಗ್ಭಿಃ ಕಥಮಪಿ ಕಷ್ಟೇನ ಸ್ಪ್ರಷ್ಟುಂ ಈಶಾಃ ಸಮರ್ಥಾಃ, ಸ್ತೋತುಂ ಸಮರ್ಥಾಃ ಇತಿ ಯಾವತ್, ಸ್ಪ್ರಷ್ಟುಂ ಇತ್ಯುಕ್ತಾ ಬ್ರಹ್ಮಾದೀನಾಂ ಅಪಿ ಸಾಕಲ್ಯೇನ ಹರಿಗುಣ-ಲೇಶಲೇಶಸ್ತೋತ್ರೇ ನ ಸಾಮರ್ಥ್ಯಮಿತಿ ಸೂಚಯತಿ । ತತ್ ತಸ್ಮಾತ್, ಇಹ ಲೋಕೇ, ಪ್ರಕೃತಭಗವತ್ಸ್ತುತೌ ಇತಿ ವಾ, ತದಿತರೇ ಬ್ರಹ್ಮಾದಿಭ್ಯಃ ಅನ್ಯೇ ಕೇ ನು ಋಷ್ಯಾದ್ಯಾಃ ಕಲ್ಪಾಃ ಸಮರ್ಥಾಃ ನು ವಿತರ್ಕೇ, ವಯಂ ತು ಅಸ್ಮದಾದ್ಯಾಸ್ತು ಕೇ ? ಯದಾ ಋಷ್ಯಾ-ದಯೋಽಪಿ ಭಗವಂತಂ ಸ್ತೋತುಂ ಅಸಮರ್ಥಾಃ, ಅಸ್ಮದಾದಯಃ ಅಸಮರ್ಥಾಃ ಇತಿ ಕಿಂ ವಾ ವಾಚ್ಯಮ್ ಇತಿ ಭಾವಃ ॥೭॥

**ಅನ್ವಯ** — ಅಗ್ರ್ಯಾಃ ಶ್ರುತಿಪದವಿದಿತಾಃ ಬ್ರಹ್ಮವಾಯೂ ಸುಪರ್ಣಾಃ ಶೇಷೇಶಾದ್ಯಾಃ ಸುರೇಶಾಃ ಜನಿಶತವೃತಯಾ ಭಾಗವತ್ಯಾ ಭಕ್ತ್ಯಾ, ದೇವ್ಯಾ ಚ ದತ್ತಾವಲಂಬಾಃ (ಸಂತಃ) ಕರುಣಾವಾರಿರಾಶೌ ರಮೇಶೇ ಅಂಶಾಂಶೇ ತು ವರ್ಯಾಭಿಃ ವಾಗ್ಭಿಃ ಕಥಮಪಿ ಸ್ಪ್ರಷ್ಟುಂ ಈಶಾಃ, ತತ್ ಇಹ ತದಿತರೇ ಕೇ ನು ಕಲ್ಪಾಃ ? ವಯಂ ತು ಕೇ ?

**ಅನುವಾದ**— **ಅಗ್ರ್ಯಾಃ** = ಋಷಿಮುಂತಾದವರಿಗಿಂತ ಉತ್ತಮರಾದ, **ಶ್ರುತಿ-ಪದವಿದಿತಾಃ** = ವೇದಶಬ್ದಗಳಿಂದ ಪ್ರತಿಪಾದ್ಯರಾದ, **ಬ್ರಹ್ಮವಾಯೂ** = ಬ್ರಹ್ಮದೇವರು ಮತ್ತು ವಾಯುದೇವರು, **ಸುಪರ್ಣಾಃ** = ಗರುಡದೇವರು, **ಶೇಷೇಶಾದ್ಯಾಃ** = ಶೇಷದೇವರು, ರುದ್ರದೇವರು ಮೊದಲಾಗಿ ಉಳ್ಳ, **ಸುರೇಶಾಃ** = ದೇವಶ್ರೇಷ್ಠರು, **ಜನಿಶತ** = ನೂರಾರು ಜನ್ಮಗಳಿಂದ, **ವೃತಯಾ** = ಸಂಪಾದಿಸಲ್ಪಟ್ಟ, **ಭಾಗವತ್ಯಾ** = ಭಗವಂತನಾದ ಶ್ರೀಮನ್ಮಹಾವಿಷ್ಣುವಿನ ಸಂಬಂಧವುಳ್ಳ, **ಭಕ್ತ್ಯಾ** = ಭಕ್ತಿಯಿಂದ, **ದೇವ್ಯಾ ಚ** = ಶ್ರೀಮಹಾ-ಲಕ್ಷ್ಮೀದೇವಿಯಿಂದಲೂ, **ದತ್ತಾವಲಂಬಾಃ (ಸಂತಃ)**= ಕೊಡಲ್ಪಟ್ಟ ಹಸ್ತಾವಲಂಬನ-(ಆಶ್ರಯ)ವುಳ್ಳವರಾಗಿ, **ಕರುಣಾವಾರಿರಾಶೌ** = ದಯಾಸಮುದ್ರನಾದ, **ರಮೇಶೇ** = ಲಕ್ಷ್ಮೀಪತಿಯಾದ ಶ್ರೀಮನ್ಮಹಾವಿಷ್ಣುವಿನಲ್ಲಿ, **ಅಂಶಾಂಶೇ ತು** = (ಪರಮಾತ್ಮನ ಒಂದು ಗುಣದ) ಲೇಶ ಲೇಶವಿಷಯದಲ್ಲಿಯಾದರೂ, **ವರ್ಯಾಭಿಃ** = ಉತ್ತಮವಾದ, **ವಾಗ್ಭಿಃ** = ಮಾತುಗಳಿಂದ, **ಕಥಮಪಿ** = ಹೇಗಾದರೂ, (ಬಹಳ ಕಷ್ಟದಿಂದ) **ಸ್ಪ್ರಷ್ಟುಂ** =

ಮುಟ್ಟುವುದಕ್ಕೆ (ಸ್ತೋತ್ರಮಾಡಲು), ಈಶಾಃ = ಸಮರ್ಥರು, ತತ್ = ಆದುದರಿಂದ, ಇಹ = ಈ ಲೋಕದಲ್ಲಿ (ಪ್ರಕೃತವಾದ ಭಗವಂತನ ಸ್ತುತಿಯ ವಿಷಯದಲ್ಲಿ) ತದಿತರೇ = ಬ್ರಹ್ಮಾದಿಗಳಿಗಿಂತ ಬೇರೆಯಾದ, ಕೇ ನು = ಯಾವ ಋಷಿ ಮೊದಲಾದವರು ತಾನೇ, ಕಲ್ಪಾಃ = ಸಮರ್ಥರಾಗಿದ್ದಾರೆ ? ವಯಂ (ತು)= ಮನುಷ್ಯರಾದ ನಾವಾದರೋ, ಕೇ = ಯಾರು ?

**ತಾತ್ಪರ್ಯ** — ಬ್ರಹ್ಮದೇವರು, ವಾಯುದೇವರು, ಗರುಡದೇವರು, ಶೇಷದೇವರು, ಮಹಾರುದ್ರದೇವರು ಮೊದಲಾದ ದೇವಶ್ರೇಷ್ಠರು ಋಷ್ಯಾದಿಗಳಿಗಿಂತ ಉತ್ತಮರು, ವೇದಪ್ರತಿಪಾದ್ಯರು. ಅವರು ನೂರಾರು ಜನ್ಮಗಳಲ್ಲಿ ಭಗವಂತನಾದ ಶ್ರೀಮನ್ಮಹಾ-ವಿಷ್ಣುವಿನಲ್ಲಿ ಭಕ್ತಿಯನ್ನು ಮಾಡಿ ಆದರಿಂದ ಉಂಟಾದ ಹರಿಪ್ರಸಾದದಿಂದಲೂ ಮತ್ತು ಶ್ರೀಮಹಾಲಕ್ಷ್ಮೀದೇವಿಯ ಅನುಗ್ರಹದಿಂದಲೂ, ಕೃಪಾಸಮುದ್ರನಾದ ರಮಾಪತಿಯ, ಯಾವುದೋ ಒಂದು ಗುಣದ ಅಂಶದ ಲೇಶದ ವಿಷಯದಲ್ಲಿ ಉತ್ತಮವಾದ ಮಾತುಗಳಿಂದ ಕಷ್ಟಪಟ್ಟು ಹೇಗೋ ಸ್ವಲ್ಪಮಟ್ಟಿಗೆ ಸ್ತೋತ್ರಮಾಡಲು ಸಮರ್ಥರಾಗುತ್ತಾರೆ. ಅಂತಹ ಮಹಾಮಹಿಮರೂ ಸಂಪೂರ್ಣವಾಗಿ ಹರಿಯ ಯಾವುದೇ ಒಂದು ಗುಣದ ಲೇಶ ಲೇಶವನ್ನೂ ಸ್ತೋತ್ರಮಾಡಲಾರರು, ಹೀಗಿರುವಾಗ, ಆ ಪರಮಾತ್ಮನ ಗುಣ-ಸ್ತುತಿಯ ವಿಷಯದಲ್ಲಿ, ಬ್ರಹ್ಮಾದಿಗಳಿಗಿಂತ ಬೇರೆಯಾದ ಋಷಿಮೊದಲಾದವರು ಸಮರ್ಥರಾಗುತ್ತಾರೆಯೇ ? ಮನುಷ್ಯರಾದ ನಾವು ಹರಿಗುಣಸ್ತುತಿಯನ್ನು ಮಾಡಲು ಸಮರ್ಥರಲ್ಲವೆಂದು ಹೇಳಬೇಕಾಗಿಯೇ ಇಲ್ಲವಷ್ಟೇ ?

**ಅಪ್ಯೇವಂ ಹಂತ ಧಾರ್ಷ್ಟ್ಯಾತ್ ಕತಿಪಯಪದಕೈರೀಡ್ಯಪಾದಸ್ಯಪಾಂಸೂನ್**
**ಅಸ್ಮಾಭಿಃ ಸ್ತಾವಯಂತ್ವಿತ್ಯಲಮಮಲಮತೀನನ್ವಿಯಾಂ ತಾನವನ್ಯಾಮ್ ।**
**ಭಾವಂ ಭಾವಂ ಸುಭೀತೋ ಭವಗತಿಭಿರಹಂ ಮೋಹಮೋಕ್ಷೇ ವಿವಕ್ಷನ್**
**ಕಾರಂ ಕಾರಂ ಸಪರ್ಯಾಂ ಪರಮಪದಮದಃ ಸಂವಿವಿತ್ಸನ್ ವಿವಿಕ್ಷನ್ ॥೮॥**

**ವ್ಯಾಖ್ಯಾನ**— ತರ್ಹಿ ಕಥಂ ಭವದ್ಭಿಃ ಭಗವತ್ಸ್ತೋತ್ರಮಾರಭ್ಯತೇ ಇತ್ಯತಃ ಬ್ರಹ್ಮಾದ್ಯನುಗ್ರಹೇಣ ಅಸ್ಮದಾದಿಯೋಗ್ಯತಾನುಸಾರೇಣ ಭಗವತ್ಸ್ತುತೌ ಕಥಂಚಿತ್

ಅಧಿಕಾರಃ ಸ್ಯಾತ್ ಇತಿ ಭಾವೇನ ಆಹ — **ಅಪ್ಯೇವಮಿತಿ** ॥ ಅಪಿ ಯದ್ಯಪಿ ಏವಂ ಭಗವತ್ಸ್ತೋತ್ರಮಸ್ಮದಾದಿಭಿಃ ಕರ್ತುಮಶಕ್ಯಂ ತಥಾಪಿ ಇತಿಶೇಷಃ, ಹಂತ ಆಶ್ಚರ್ಯಂ, ಅವನ್ಯಾಂ ಭೂಮೌ, ಭಾವಂ ಭಾವಂ, ಭೂತ್ವಾ ಭೂತ್ವಾ, ಇದಾನೀಂ ಪುನಃಪುನರುತ್ಪದ್ಯೇತ್ಯರ್ಥಃ ಆಭೀಕ್ಷ್ಣ್ಯೇಣಮುಲ್ ಚ (೩-೪-೨೨) ಇತಿ ಣಮುಲ್ 'ನಿತ್ಯವೀಪ್ಸಯೋಃ' (೮-೧-೪) ಇತಿದ್ವಿತ್ವಮ್, ಭವಗತಿಭಿಃ ಭವಾನಾಂ ಸಂಸಾರಾಣಾಂ ಗತಯಃ ಆಗತಯಃ ಏಷ್ಯತ್ಕಾಲಿಕ್ಯಃ ಪ್ರಾಪ್ತಯಃ ತಾಭಿಃ ಸುಭೀತಃ ಅತ್ಯಂತಂ ಭೀತಃ, ಸಾಂಸಾರಿಕಭಯಪರಿಹಾರಾರ್ಥಮಿತಿಶೇಷಃ, ಅದಃ ಪರಮಪದಂ ಇದಂ ಅತ್ಯುತ್ತಮಂ ಶ್ರೀವಿಷ್ಣುಪಾದಂ ವಿವಿಕ್ಷನ್ ಪ್ರವೇಷ್ಟುಂ ಇಚ್ಛನ್, ವಿಷ್ಣುಪದಪ್ರಾಪ್ತಿಲಕ್ಷಣಮೋಕ್ಷಮಿಚ್ಛನ್ ಇತ್ಯರ್ಥಃ, ಮೋಕ್ಷಾರ್ಥಂ ಚೇತಿ ಶೇಷಃ, ಅದಃ ಪದಂ ಸಂವಿವಿತ್ಸನ್ ಸಮ್ಯಗ್ಜ್ಞಾತುಮಿಚ್ಛನ್ ಸಮ್ಯಗ್ ಜ್ಞಾನಾರ್ಥಂ ಚೇತಿ ಶೇಷಃ, ಮೋಹಮೋಕ್ಷೇ, ತಾದರ್ಥ್ಯೇಽಸಪ್ತಮೀ, ಮೋಹಸ್ಯ ಮಿಥ್ಯಾಜ್ಞಾನಸ್ಯ ಮೋಕ್ಷೇ ನಾಶಾರ್ಥಂ ಅದಃ ಪದಂ ವಿವಕ್ಷನ್ ವಿಶೇಷೇಣ ವಕ್ತುಮಿಚ್ಛನ್ ಸಮ್ಯಗ್ಜ್ಞಾನಾರ್ಥಂ ಸ್ತೋತುಮಿಚ್ಛನ್ ಇತ್ಯರ್ಥಃ, ತೇಷಾಂ ಬ್ರಹ್ಮಾದಿಗುರೂಣಾಂ ಇತಿ ಯೋಗ್ಯತಯಾ ಸಂಬಧ್ಯತೇ, ಸಪರ್ಯಾಂ ಪೂಜಾಂ ಕಾರಂ ಕಾರಂ ಕೃತ್ವಾ, ಧಾಷ್ಟ್ಯಾತ್ ವೈಯ್ಯಾತ್ಯಾತ್, ತೇ ಇತ್ಯಪಿ ಯೋಗ್ಯತಯಾ ಸಂಬಧ್ಯತೇ, ತೇ ಬ್ರಹ್ಮಾದ್ಯಾಃ ಕತಿಪಯಪದಕೈಃ ಕೈಶ್ಚಿತ್ ಪದ್ಯೈಃ ಈಡ್ಯಪಾದಸ್ಯ ಈಡ್ಯಸ್ಯ ಬ್ರಹ್ಮಾದಿಸ್ತುತ್ಯಸ್ಯ ವಿಷ್ಣೋಃ ಪಾದಸ್ಯ ಪಾಂಸೂನ್ ಅಸ್ಮಾಭಿಃ ಸ್ತಾವಯಂತು ಸ್ತೋತ್ರಂ ಕಾರಯಂತು ಇತ್ಯಭಿಪ್ರಾಯೇಣ ತಾನ್ ಅಮಲಮತೀನ್ ಬ್ರಹ್ಮಾದೀನ್ ಅಲಂ ಅಸ್ವಿಯಾಂ, ಅನುಗಚ್ಛೇಯಂ ಶರಣಂ ಗಚ್ಛೇಯಂ ಇತಿ ಯಾವತ್ ಅನುಪೂರ್ವಾತ್ ಇಣೋ ಲಿಙ್ ಉತ್ತಮಪುರುಷೈಕವಚನಮ್ । ಯದ್ಯಪ್ಯಸ್ಮಾಕಂ ಭಗವದಂಗಸ್ತುತೌ ನ ಸಾಮರ್ಥ್ಯಂ, ತಥಾಪ್ಯಸ್ಮಾಕಂ ಮೋಕ್ಷೋಽಪೇಕ್ಷಿತಃ, ಸಚ ಮೋಕ್ಷಃ ಭಗವಜ್ಜ್ಞಾನಮಂತರೇಣ ನ ಸ್ಯಾತ್ । ತಸ್ಮಾತ್ ಭಗವತಃ ಸ್ತೋತ್ರರೂಪಕರ್ಮಕರಣಾರ್ಥಂ ಗುರುಸಪರ್ಯಾಂ ಕೃತ್ವಾ ಗುರೂನ್ ಶರಣಾಗತೋಽಸ್ಮಿ ಇತಿ ಸಮುದಾಯಾಭಿಪ್ರಾಯಃ ॥೮॥

**ಅನ್ವಯ** — ಅಪಿ, ಏವಂ, ಹಂತ, ಅವನ್ಯಾಂ ಭಾವಂ ಭಾವಂ ಭವಗತಿಭಿಃ ಸುಭೀತಃ ಅಹಂ (ಸಾಂಸಾರಿಕಭಯಪರಿಹಾರಾರ್ಥಂ) ಅದಃ ಪರಮಪದಂ ವಿವಿಕ್ಷನ್, (ಮೋಕ್ಷಾರ್ಥಂ ಚ) ಅದಃ ಪರಮಪದಂ ಸಂವಿವಿತ್ಸನ್ (ಸಮ್ಯಗ್ ಜ್ಞಾನಾರ್ಥಂ ಚ)

ಮೋಹಮೋಕ್ಷೇ ಅದಃ ಪದಂ ವಿವಕ್ಷನ್ (ತೇಷಾಂ) ಸಪರ್ಯಾಂ ಕಾರಂ ಕಾರಂ ಧಾರ್ಷ್ಟ್ಯಾತ್, (ತೇ) ಕತಿಪಯಪದಕೈಃ ಈಡ್ಯಪಾದಸ್ಯ ಪಾಂಸೂನ್ ಅಸ್ಮಾಭಿಃ ಸ್ತಾವಯಂತು ಇತಿ ಅಮಲಮತೀನ್ ತಾನ್ ಅಲಂ ಅನ್ವಿಯಾಮ್ ।

**ಅನುವಾದ**— ಅಪಿ = ಯದ್ಯಪಿ, ಏವಂ = ಪರಮಾತ್ಮನ ಸ್ತೋತ್ರವು ನಮ್ಮಂತಹವರಿಂದ ಮಾಡಲು ಅಶಕ್ಯವಾದರೂ, **ಹಂತ** = ಆಶ್ಚರ್ಯವು, **ಅವನ್ಯಾಂ** = ಭೂಮಿಯಲ್ಲಿ, **ಭಾವಂ ಭಾವಂ** = ಹುಟ್ಟಿಹುಟ್ಟಿ, **ಭವಗತಿಭಿಃ**, **ಭವ** = ಸಂಸಾರಗಳ (ಮುಂದಿನ ಅನೇಕಜನ್ಮಗಳ) ಗತಿಭಿಃ = ಬರಲಿರುವ ಪ್ರಾಪ್ತಿಗಳಿಂದ, ಸುಭೀತಃ = ಬಹಳವಾಗಿ ಹೆದರಿದ, **ಅಹಂ** = ನಾನು (ಸಾಂಸಾರಿಕಭಯಪರಿಹಾರಾರ್ಥಂ = ಸಂಸಾರ ಭಯಪರಿಹಾರಕ್ಕಾಗಿ) **ಅದಃ** = ಈ, **ಪರಮಪದಂ** = ಅತ್ಯುತ್ತಮವಾದ ಶ್ರೀವಿಷ್ಣುಪಾದವನ್ನು, **ವಿವಿಕ್ಷನ್** = ಪ್ರವೇಶಮಾಡುವ ಇಚ್ಛೆಯುಳ್ಳವನಾಗಿ (ಮೋಕ್ಷಾರ್ಥಂ ಚ = ಮೋಕ್ಷಕ್ಕೋಸ್ಕರ), (ಅದಃ ಪರಮಪದಂ) **ಸಂವಿವಿತ್ಸನ್** = ಚೆನ್ನಾಗಿ ತಿಳಿಯಲು ಇಚ್ಛೆಯುಳ್ಳವನಾಗಿ, (ಸಮ್ಯಗ್‌ಜ್ಞಾನಾರ್ಥಂ ಚ = ಸರಿಯಾದ ಜ್ಞಾನಕ್ಕೋಸ್ಕರವೂ) **ಮೋಹ** = ಮಿಥ್ಯಾಜ್ಞಾನದ, **ಮೋಕ್ಷೇ** = ನಾಶಕ್ಕೋಸ್ಕರ, (ಅದಃ ಪರಮಪದಂ) **ವಿವಕ್ಷನ್** = (ಸಮ್ಯಗ್-ಜ್ಞಾನಕ್ಕೋಸ್ಕರ) ವಿಶೇಷವಾಗಿ ಸ್ತೋತ್ರಮಾಡುವ ಇಚ್ಛೆ ಉಳ್ಳವನಾಗಿ, (**ತೇಷಾಂ** = ಆ ಬ್ರಹ್ಮಾದಿಗಳ) **ಸಪರ್ಯಾಂ** = ಪೂಜೆಯನ್ನು (ಸೇವೆಯನ್ನು), **ಕಾರಂ ಕಾರಂ** = ಮಾಡಿ ಮಾಡಿ, **ಧಾರ್ಷ್ಟ್ಯಾತ್** = (ಅವರು ನನ್ನಿಂದ ಸ್ತೋತ್ರಮಾಡಿಸುತ್ತಾರೆಂಬ) ದಿಟ್ಟತನದಿಂದ, (ತೇ = ಆ ಬ್ರಹ್ಮಾದಿಗಳು) **ಕತಿಪಯಪದಕೈಃ** = ಕೆಲವೇ ಪದಗಳಿಂದ, **ಈಡ್ಯಪಾದಸ್ಯ** = ಬ್ರಹ್ಮಾದಿಸುತ್ತ್ಯನಾದ ವಿಷ್ಣುವಿನ ಪಾದದ, **ಪಾಂಸೂನ್** = ಧೂಳಿಗಳನ್ನು, **ಅಸ್ಮಾಭಿಃ** = ನಮ್ಮಿಂದ, **ಸ್ತಾವಯಂತು** = ಸ್ತೋತ್ರಮಾಡಿಸಲಿ, ಇತಿ = ಎಂಬುದಾಗಿ, **ಅಮಲಮತೀನ್** = ನಿರ್ಮಲವಾದ ಬುದ್ಧಿಯುಳ್ಳ, **ತಾನ್** = ಬ್ರಹ್ಮಾದಿಗಳನ್ನು, **ಅಲಂ** = ಅತಿಶಯವಾಗಿ, **ಅನ್ವಿಯಾಂ** = ಶರಣು ಹೊಂದುತ್ತೇನೆ.

**ತಾತ್ಪರ್ಯ**— ಹಾಗಾದರೆ ನೀವು ಭಗವಂತನ ಸ್ತೋತ್ರವನ್ನು ಏತಕ್ಕೆ ಪ್ರಾರಂಭಮಾಡುತ್ತೀರಿ ಎಂದರೆ ಬ್ರಹ್ಮಾದಿಗಳ ಅನುಗ್ರಹದಿಂದ ನಮ್ಮ ಯೋಗ್ಯತಾನುಸಾರವಾಗಿ ಪರಮಾತ್ಮನ ಸ್ತುತಿಯಲ್ಲಿ ಹೇಗಾದರೂ ನಮಗೂ ಸ್ವಲ್ಪ ಅಧಿಕಾರವಿರುತ್ತದೆ ಎಂದು ಹೇಳುತ್ತಾರೆ.

ಯದ್ಯಪಿ ಪರಮಾತ್ಮನ ಸ್ತೋತ್ರವನ್ನು ನಮ್ಮಂತಹವರು ಮಾಡಲು ಸಾಧ್ಯವಿಲ್ಲ. ಆದರೂ ಕೂಡ ನಾವು ಸ್ತೋತ್ರಮಾಡಲು ಹೊರಟಿದ್ದೇವೆ. ಆಶ್ಚರ್ಯ ! ಈ ನಾವು ಭೂಮಿಯಲ್ಲಿಪುನಃ ಪುನಃ ಅನೇಕ ಬಾರಿ ಹುಟ್ಟಿದೆವು. ಇನ್ನೂ ಮುಂದೆ ಬರಲಿರುವ ಅನೇಕ ಜನ್ಮಗಳು ಇವೆ. ಅವುಗಳಿಂದ ನಾವು ತುಂಬಾ ಹೆದರಿದ್ದೇವೆ. ಆ ಸಾಂಸಾರಿಕಭಯ-ಪರಿಹಾರಕ್ಕಾಗಿ ಇಂತಹ ಅತ್ಯುತ್ತಮವಾದ ಶ್ರೀವಿಷ್ಣುವಿನ ಪಾದವನ್ನು ಪ್ರವೇಶಿಸಲು ಬಯಸುತ್ತಿದ್ದೇವೆ. ಆ ಮೋಕ್ಷಕ್ಕಾಗಿ ಪರಮಾತ್ಮನ ಅತ್ಯುತ್ತಮವಾದ ಪಾದದ ತತ್ವಜ್ಞಾನವನ್ನು ಬಯಸುತ್ತಿದ್ದೇವೆ. ಅಂತಹ ಸಮ್ಯಗ್‌ಜ್ಞಾನಕ್ಕೋಸ್ಕರ ಮಿಥ್ಯಾಜ್ಞಾನ ನಾಶವಾಗಬೇಕಾಗಿದೆ. ಆದಕ್ಕಾಗಿ ಸರ್ವೋತ್ತಮನಾದ ಶ್ರೀವಿಷ್ಣುವಿನ ಪಾದವನ್ನುಸ್ತೋತ್ರಮಾಡಲು ಬಯಸಿದ್ದೇವೆ. ಅದಕ್ಕಾಗಿ ಮೊದಲು ಬ್ರಹ್ಮಾದಿಗುರುಗಳ ಸೇವೆಯನ್ನು ಮತ್ತು ಪೂಜೆಯನ್ನು ಪುನಃಪುನಃ ಅನೇಕ ಬಾರಿ ಮಾಡಿ ಅವರು ನಮ್ಮಲ್ಲಿ ಅನುಗ್ರಹವನ್ನು ಮಾಡಿಯೇ ಮಾಡುತ್ತಾರೆ ಎಂಬ ದಿಟ್ಟತನವನ್ನು ಹೊಂದಿದ್ದೇವೆ. 'ಆ ಬ್ರಹ್ಮಾದಿಗುರುಗಳು ಅವರಿಂದ ಸ್ತೋತ್ರಮಾಡಿಸಿ-ಕೊಳ್ಳುವ ಶ್ರೀಹರಿಯ ದಿವ್ಯಪಾದದ ಧೂಳಿಗಳನ್ನು ಕೆಲವೇ ಪದಗಳಿಂದ, ನಮ್ಮಿಂದ ಸ್ತೋತ್ರಮಾಡಿಸಲಿ' ಎಂದು ಶ್ರೀಹರಿಯಲ್ಲಿ ನಿರ್ದೋಷವಾದ ತತ್ವಜ್ಞಾನವುಳ್ಳ ಈ ಗುರುಪರಂಪರೆಯನ್ನು ಬಹಳವಿನಯದಿಂದ ಶರಣುಹೊಂದುತ್ತೇವೆ. ಬ್ರಹ್ಮಾದಿಗಳ ಅನುಗ್ರಹದಿಂದಲೇ ನಾನು ಈಗ ಸ್ವಲ್ಪವಾದರೂ ಸ್ತೋತ್ರಮಾಡಲು ಶಕ್ತನಾಗುತ್ತೇನೆ ಎಂದು ತಾತ್ಪರ್ಯ. ||೮||

**ಪಾದಃ ಸಾದಂ ಸದಾ ನೋ ದರಯತು ಸ ಹರೇರ್ಯೋ ಬಲೇಃ ಕಾಲನೇಚ್ಛಾ-**
**ವರ್ಧಿಷ್ಣೋರೂರ್ಧ್ವಮೃದ್ಧಃ ಸಪದಿನಖಮುಖೇನಾಂಡಖಂಡಂ ಚಖಾನ ।**
**ಆಯಾಂತ್ಯಾ ಸ್ವಃಸ್ರವಂತ್ಯಾ ಸ್ವತಲಕಿಸಲಯಜ್ಯೋತ್ಸ್ನಯಾ ವ್ಯಾಪ ವಿಶ್ವಂ**
**ವರ್ಣಾಂಭೋಭಿರ್ವಿಲಿಂಪನ್ನಿವ ಭುವನಮಹಾಭಿತ್ತಿಮತ್ಯಾಪಘಾಲ ||೯||**

**ವ್ಯಾಖ್ಯಾನ–** ಇದಾನೀಂ ಭಗವದಂಗಾನಿ ಕ್ರಮೇಣ ಸ್ತೋಷ್ಯನ್ ಆದೌ ತಾವತ್ ಪಾದಂ ಸ್ತೌತಿ — **ಪಾದಮಿತಿ ||** ಬಲೇಃ ಬಲಿಚಕ್ರವರ್ತಿನಃ ಕಾಲನೇಚ್ಛಾವರ್ಧಿಷ್ಣೋಃ ಕಾಲನಶಬ್ದಸ್ಯ ಬಲಿಶಬ್ದಸಾಪೇಕ್ಷತ್ವೇಽಪಿ ನಿತ್ಯಸಾಪೇಕ್ಷತ್ವಾತ್ ಸಮಾಸಃ, ಕಾಲನೇಚ್ಛಯಾ ಸಂಹಾರೇಚ್ಛಯಾ, ವರ್ಧಿಷ್ಣೋಃ ಅತಿಶಯೇನ ವರ್ಧಮಾನಸ್ಯ, ಅಲಂಕೃಞ್

ನಿರಾಕೃಞ್‌ಪ್ರಜನೋತ್ಪಚೋತ್ಪತೋನ್ಮದರುಚ್ಯಪತ್ರಪವೃತುವೃಧುಸಹಚರ ಇಷ್ಣುಚ್ (೩-೨-೧೩೬) ಇತಿವೃಧೇಃ 'ಇಷ್ಣುಚ್' ಪ್ರತ್ಯಯಃ, ಹರೇಃ ಶ್ರೀವಿಷ್ಣೋಃ ಯಃ ಪಾದಃ ಊರ್ಧ್ವಂ ಋದ್ಧಃ ಸನ್ ಸಪದಿ ನಖಮುಖೇನ ನಖಾಗ್ರೇಣ, ಅಂಡಖಂಡಂ ಬ್ರಹ್ಮಾಂಡೈಕದೇಶಂ ಚಖಾನ ಖನಿತವಾನ್, 'ಖನು ವಿದಾರಣೇ' ಇತ್ಯಸ್ಮಾದ್ ಧಾತೋಃ ಕರ್ತರಿ ಲಿಟ್, ಬ್ರಹ್ಮಾಂಡಖನನಾನಂತರಂ ಚ ಆಯಾಂತ್ಯಾ ಬ್ರಹ್ಮಾಂಡಬಹಿರಾವರಣಾತ್ ಆಗಚ್ಛಂತ್ಯಾ ಸ್ವಃಸ್ರವಂತ್ಯಾ ಸ್ವರ್ಗನದ್ಯಾ ಸಹ, 'ಸ್ರೋತಸ್ವತೀ ದ್ವೀಪವತೀ ಸ್ರವಂತೀ ನಿಮ್ನಗಾಪಗಾ' ಇತ್ಯಮರಃ, ಸ್ವತಲಕಿಸಲಯಜ್ಯೋತ್ಸ್ನಯಾ ಸ್ವಸ್ಯ ಪಾದಸ್ಯ ತಲಮೇವ-ಕಿಸಲಯಂ ಪಲ್ಲವಃ ತಸ್ಯ ಜ್ಯೋತ್ಸ್ನಯಾ ಕಾಂತ್ಯಾ, ಚಂದ್ರಕಾಂತೌ ಪ್ರಸಿದ್ಧ-ಜ್ಯೋತ್ಸ್ನಾಶಬ್ದಂ ಪ್ರಯುಂಜಾನಃ ಸ್ವತಲಕಿಸಲಯಸ್ಯ ಚಂದ್ರಸಾಮ್ಯಂ ಅಭಿಪ್ರೈತಿ, ವಿಶ್ವಂ ಜಗತ್ ವ್ಯಾಪ ವ್ಯಾಪ್ತವಾನ್ । ತಥಾ ಸ್ವತಲಕಿಸಲಯಜ್ಯೋತ್ಸ್ನಾಖ್ಯವರ್ಣಾಂಬೋಭಿಃ ವರ್ಣಾಃ ಲೇಪನಸಾಧನದ್ರವ್ಯಾಣಿ ತೇಷಾಂ ಅಂಭೋಭಿಃ ಸಲಿಲೈಃ ವಿಲೇಪನ-ಸಾಧನೋದಕೈರಿತ್ಯರ್ಥಃ, ವರ್ಣಃ ಸ್ವರ್ಣಕಥಾಕುಥಮತಿಗಣಶೋಭಾಯಶೋ-ವಿಶೇಷೇಷು । 'ಗೀತಿಕ್ರಮೇ ದ್ವಿಜಾದೌ ಶುಕ್ಲಾದೌ ಚಾಕ್ಷರೇಷು ವರ್ಣಂ ವಾ' ಇತಿನಾನಾರ್ಥರತ್ನಮಾಲಾ । ಭುವನಮಹಾಭಿತ್ತಿಂ ಭುವನಸ್ಯ ಜಗತಃ ಸಂಬಂಧಿನೀಂ ಮಹಾಭಿತ್ತಿಂ ಬ್ರಹ್ಮಾಂಡಾವರಣರೂಪಾಂ ಭಿತ್ತಿಂ ವಿಲಿಂಪನ್ನಿವ ವಿಲೇಪನಂ ಕುರ್ವನ್ನಿವ ಅತ್ಯಾಪಘಾಲ । ಪ್ರಕಾಶಮಾನಬ್ರಹ್ಮಾಂಡಭಿತ್ತಿಪ್ರತಿಘಾತೇನ ದ್ವಿಗುಣಿತಯಾ ಸ್ವತಲ-ಕಿಸಲಯಪ್ರಭಯಾ ಬ್ರಹ್ಮಾಂಡಾಂತರ್ಭಾಗಂ ಪೂರಯಾಮಾಸೇತ್ಯರ್ಥಃ । ಯದ್ಯಪಿ ಫಲನಿಷ್ಪತ್ತೌ ಫಲಗತೌ ಇತಿ ಧಾತುದ್ವಯಂ ಉಕ್ತಾರ್ಥೇ ನ ಪಠ್ಯತೇ, ತಥಾಪಿ 'ಆಅತಿ' ಇತ್ಯುಪಸರ್ಗಾತ್ ಪ್ರಕಾಶಮಾನವಸ್ತುಪ್ರತಿಘಾತೇನ ಅಂತಃಪೂರಣಾರ್ಥೋ ಭವತಿ । ಯದಾ ರಕ್ತಾ ವಿಷ್ಣುಪಾದತಲಪ್ರಭಾ ಬ್ರಹ್ಮಾಂಡಭಿತ್ತೇರುಪರಿ ಪತಿತಾ ತದಾ ಬ್ರಹ್ಮಾಂಡಭಿತ್ತಿಃ ಗೈರಿಕಾದಿಕೈಃ ವಿಲಿಪ್ತೇವ ಜಾತಾ, ತಥಾ ಪ್ರಕಾಶಮಾನಬ್ರಹ್ಮಾಂಡಭಿತ್ತೌ ನಿಪತಿತಾ ಶ್ರೀವಿಷ್ಣುಪಾದತಲಪ್ರಭಾ ಪ್ರಕಾಶಮಾನಬ್ರಹ್ಮಾಂಡಭಿತ್ತಿಪ್ರತಿಘಾತೇನ ದ್ವಿಗುಣಿತಾ ಸತೀ ಪಶ್ಚಾದ್ಗತಾ ಬ್ರಹ್ಮಾಂಡಾಂತರ್ಭಾಗೇ ಪೂರ್ಣಾ ಇತ್ಯರ್ಥಃ । ಸ ಪಾದಃ ನಃ ಅಸ್ಮಾಕಂ ಸಾದಂ ದುಃಖಂ, ಅವಸಾದನಾರ್ಥಾತ್ ಸದೇರ್ಭಾವೇ ಘಞ್ ರೂಪಂ । ದರಯತು ಭೀಷಯತು, ಪರಿಹರತು ಇತಿ ತಾತ್ಪರ್ಯಾರ್ಥಃ । ದೃಭಯೇ ಇತ್ಯಸ್ಮಾದ್ ಹೇತುಮಣ್ಣಿಚಿ ಘಟಾದಿಷು ಪಾಠಾತ್ ಮಿತ್ವೇ ಮಿತಾಂ ಹ್ರಸ್ವಃ(೬-೪-೯೨) ಇತಿ ಹ್ರಸ್ವಃ ದೃವಿದಾರಣೇ ಇತ್ಯಸ್ಯ ತು ದಾರಯತೀತಿ ಸ್ಯಾತ್ (ದೃ ವಿದಾರಣೇ ಇತಿಕ್ರ್ಯಾದೇರಯಂ ಮಿತ್ವಾರ್ಥೋಽನುವಾದಃ ಸಿ.ಕೌ.)

**ಅನ್ವಯ**— ಬಲೇಃ ಕಾಲನೇಚ್ಛಾವರ್ಧಿಷ್ಣೋಃ ಹರೇಃ ಯಃ ಪಾದಃ ಊರ್ಧ್ವಂ ಋದ್ಧಃ ಸನ್, ಸಪದಿ ನಖಮುಖೇನ ಅಂಡಖಂಡಂ ಚಖಾನ, (ತತಃ) ಆಯಾಂತ್ಯಾ ಸ್ವಃಸ್ರವಂತ್ಯಾ (ಸಹ) ಸ್ವತಲಕಿಸಲಯಜ್ಯೋತ್ಸ್ನಯಾ ವಿಶ್ವಂ ವ್ಯಾಪ, (ತದಾ) ವರ್ಣಾಂಭೋಭಿಃ ಭುವನಮಹಾಭಿತ್ತಿಂ ವಿಲಿಂಪನ್ನಿವ ಅತ್ಯಾಪಘಾಲ ಸ ಪಾದಃ ನಃ ಸಾದಂ ಸದಾ ದರಯತು ॥

**ಅನುವಾದ**— ಬಲೇಃ = ಬಲಿಚಕ್ರವರ್ತಿಯ, ಕಾಲನ= ಬಂಧಿಸುವ (ಅವನ ಐಶ್ವರ್ಯ-ವನ್ನು ನಾಶಮಾಡುವ), ಇಚ್ಛಾ = ಇಚ್ಛೆಯಿಂದ, ವರ್ಧಿಷ್ಣೋಃ = ಬಹಳವಾಗಿ ವೃದ್ಧಿಹೊಂದಿದ, ಹರೇಃ = ಶ್ರೀವಿಷ್ಣುವಿನ, ಯಃ ಪಾದಃ = ಯಾವ ಪಾದವು, ಊರ್ಧ್ವಂ = ಮೇಲ್ಭಾಗದಲ್ಲಿ, ಋದ್ಧಃ (ಸನ್) = ವೃದ್ಧಿಹೊಂದಿದ್ದಾಗಿ, ಸಪದಿ = ಕೂಡಲೇ, ನಖಮುಖೇನ = ಉಗುರಿನ ತುದಿಯಿಂದ, ಅಂಡಖಂಡಂ = ಬ್ರಹ್ಮಾಂಡದ ಒಂದು ಭಾಗವನ್ನು, ಚಖಾನ = ಸೀಳಿತು, (ತತಃ = ಅನಂತರ) ಆಯಾಂತ್ಯಾ = ಬರುತ್ತಿರುವ, ಸ್ವಃಸ್ರವಂತ್ಯಾ (ಸಹ) = ಸ್ವರ್ಗಗಂಗಾನದಿಯಿಂದ (ಕೂಡಿಕೊಂಡು), ಸ್ವತಲ = ಪಾದದ ಕೆಳಭಾಗವೆಂಬ, ಕಿಸಲಯ = ಚಿಗುರೆಲೆಯ, ಜ್ಯೋತ್ಸ್ನಯಾ = ಬೆಳದಿಂಗಳಿನಿಂದ (ಕಾಂತಿಯಿಂದ), ವಿಶ್ವಂ = ಜಗತ್ತನ್ನು, ವ್ಯಾಪ = ವ್ಯಾಪಿಸಿತು. (ತದಾ= ಆಗ) ವರ್ಣಾಂಭೋಭಿಃ = ಬಣ್ಣದ ನೀರುಗಳಿಂದ, ಭುವನ = ಜಗತ್ತಿನ, ಮಹಾಭಿತ್ತಿಂ = ಬ್ರಹ್ಮಾಂಡದ ಆವರಣರೂಪವಾದ ಗೋಡೆಯನ್ನು, ವಿಲಿಂಪನ್ನಿವ = ಲೇಪಿಸುವಂತೆ, ಅತ್ಯಾಪಘಾಲ = ಪ್ರತಿಫಲಿಸುವಂತೆ ಮಾಡಿತು, ಸಃ ಪಾದಃ = ಅಂತಹ ಪಾದವು, ನಃ = ನಮ್ಮ, ಸಾದಂ = ದುಃಖವನ್ನು, ಸದಾ = ಯಾವಾಗಲೂ, ದರಯತು = ಹೆದರಿಸಲಿ (ಪರಿಹರಿಸಲಿ).

**ತಾತ್ಪರ್ಯ**— ಹಿಂದೆ ಬಲಿಚಕ್ರವರ್ತಿಯು ಇಂದ್ರನ ರಾಜ್ಯವನ್ನು ಅಪಹರಿಸಿ ತಾನೇ ಲೋಕಾಧಿಪತಿಯಾಗಿ ಶಾಶ್ವತವಾಗಿ ಇಂದ್ರನ ಪದವಿಯನ್ನು ಪಡೆಯಬೇಕೆಂಬ ಇಚ್ಛೆಯಿಂದ ನರ್ಮದಾತೀರದಲ್ಲಿ ಅಶ್ವಮೇಧಯಾಗವನ್ನು ಮಾಡುತ್ತಿದ್ದನು. ಆಗ ದೇವತೆಗಳ ಪ್ರಾರ್ಥನಾನುಸಾರವಾಗಿ ಶ್ರೀಮನ್ನಾರಾಯಣನು ಅದಿತಿಕಶ್ಯಪರ ಮಗನಾಗಿ ವಾಮನ ಎಂಬ ಹೆಸರಿನಿಂದ ಅವತರಿಸಿ ಬಲಿಯನ್ನು ಬಂಧಿಸಿ, ಅವನ ಐಶ್ವರ್ಯವನ್ನು ನಾಶಮಾಡಬೇಕೆಂದು ಬಯಸಿದನು. ಬಲಿಯ ಯಾಗಶಾಲೆಗೆ ಹೋಗಿ ಮೂರಡಿ ಸ್ಥಳವನ್ನು

ಬೇಡಿದನು. ಅವನು ಜಲಧಾರಾಪೂರ್ವಕವಾಗಿ ಸ್ಥಳವನ್ನು ದಾನ ಮಾಡಿದ ಕೂಡಲೇ ವಾಮನನು ತ್ರಿವಿಕ್ರಮನಾಗಿ ತನ್ನ ಒಂದು ಕಾಲಿನಿಂದ ಮೇಲಿನ ಲೋಕವನ್ನೆಲ್ಲಾ ಅಳೆದನು. ತ್ರಿವಿಕ್ರಮನ ಪಾದವು ಬಹಳದೊಡ್ಡದಾಗಿ ಬೆಳೆದು ತನ್ನ ಉಗುರಿನ ತುದಿಯಿಂದ ಬ್ರಹ್ಮಾಂಡದ ಒಂದು ಭಾಗವನ್ನೇ ಸೀಳಿತು. ಕೂಡಲೇ ಬ್ರಹ್ಮಾಂಡದ ಹೊರಗಿದ್ದ ದಿವ್ಯಜಲಧಾರೆಯು ಗಂಗಾರೂಪದಿಂದ ಬ್ರಹ್ಮಾಂಡದ ಒಳಗೆ ಹರಿಯಲಾರಂಭಿಸಿತು. ಧವಳವಾದ ಆ ಜಲಪ್ರವಾಹವು ಚಂದ್ರನ ಬೆಳದಿಂಗಳಿನಂತಹ ಕಾಂತಿಯಿಂದ ಕೂಡಿದ ತ್ರಿವಿಕ್ರಮನ ಪಾದತಳದ ಪ್ರಭೆಯಿಂದಲೂ, ತ್ರಿವಿಕ್ರಮನ ಕಾಲು ಮತ್ತು ಮೈಯ ನೀಲಕಾಂತಿಯಿಂದಲೂ ಮಿಶ್ರವಾಗಿ ಜಗತ್ತಿನಲ್ಲಿ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿತು. ಆಗ ಬಣ್ಣದ ನೀರುಗಳಿಂದ ಬ್ರಹ್ಮಾಂಡದ ಆವರಣವಾದ ಗೋಡೆಯನ್ನು ಬಳಿದಂತೆ ಕಾಣಿಸುತ್ತಿತ್ತು. ಪರಮಾತ್ಮನ ಪಾದದ ಕಾಂತಿಯು ಎಲ್ಲಾ ಕಡೆಯಲ್ಲಿಯೂ ಪ್ರತಿಫಲಿಸಿತು. ಇಂತಹ ವಿಚಿತ್ರಮಹಿಮೆಯುಳ್ಳ ಹರಿಯ ಪಾದವು ನಮ್ಮ ದುಃಖವನ್ನು ಹೆದರಿಸಿ ದೂರಕ್ಕೆ ಓಡಿಸಲಿ. (ನಮ್ಮ ದುಃಖವನ್ನು ಪರಿಹರಿಸಲಿ) ಎಂದು ತಾತ್ಪರ್ಯ.

**ಪಾಂತ್ವಸ್ಮಾನ್ ತಾರ್ಕ್ಷ್ಯಕೇತೋಃ ಪದನಖಮಣಯೋ ಯತ್ರ ಚಿತ್ರಾಯಮಾಣಾಃ**
**ಸೌಪರ್ಣ್ಯಶ್ಚಿತ್ರವರ್ಣಾಃ ಪ್ರತಿಕೃತಯ ಇತಿಭ್ರಾಂತಿಮಾಜಂತಿ ಭಾಂತ್ಯಃ ।**
**ಪ್ರಾಯಶ್ಚಿತ್ತಂ ಚಿಕೀರ್ಷುರ್ಬಹುಗುಣಮಧಿಕಾತಿಕ್ರಮಾಶಂಕಯಾಽಂಹಃ**
**ಸಂಹರ್ತುಃ ಪಾದಮೂಲೇ ಸ್ವಯಮಿಹ ದಶಭಿರ್ಮೂರ್ತಿಭಿಃ ಸೋಽವತೀರ್ಣಃ ॥೧೦॥**

**ವ್ಯಾಖ್ಯಾನ**— ನಖಾನ್ ಸ್ತೌತಿ — **ಪಾಂತ್ವಿತಿ** ॥ ತಾರ್ಕ್ಷ್ಯಕೇತೋಃ ತಾರ್ಕ್ಷ್ಯೋ ಗರುಡಃ ಕೇತೌ ಯಸ್ಯ ಸಃ, ತಸ್ಯ ವಿಷ್ಣೋಃ, ಗರುತ್ಮಾನ್ ಗರುಡಸ್ತಾರ್ಕ್ಷ್ಯಃ ಇತ್ಯಮರಃ । ಯತ್ರ ಪದನಖಮಣಿಷು ಚಿತ್ರಾಯಮಾಣಾಃ ಚಿತ್ರವತ್ ಆಲೇಖ್ಯವತ್ ಆಚರಂತ್ಯಃ, ಕರ್ತುಃ- ಕ್ಯಜ್‌ಸಲೋಪಶ್ಚ (೩-೧-೧೧) ಇತ್ಯಾಚಾರಾರ್ಥೇ ಕ್ಯಙ್, ಚಿತ್ರವರ್ಣಾಃ ನಾನಾ- ವರ್ಣಾಃ ಭಾಂತ್ಯಃ (ಭಾತ್ಯಃ) ಪ್ರಕಾಶಮಾನಾಃ ಸೌಪರ್ಣ್ಯಃ ಗರುಡಸಂಬಂಧಿನ್ಯಃ ಪ್ರತಿಕೃತಯಃ ಪ್ರತಿಬಿಂಬಾನಿ ಲೋಕಾನ್ ಇತಿಶೇಷಃ, ಇತಿಭ್ರಾಂತಿಂ ಆಜಂತಿ ಗಮ- ಯಂತಿ, ಅಜೇರ್ಗತ್ಯರ್ಥಾದಂತರ್ಣೀತಣ್ಯರ್ಥಾತ್ ಕರ್ತರಿ ಲಟ್ । ಇತಿ ಕಥಂ ಇತ್ಯತೋ ಭ್ರಾಂತಿಪ್ರಕಾರಮಾಹ – ಸಃ ಗರುಡಃ ಅಧಿಕಾತಿಕ್ರಮಾಶಂಕಯಾ, ಗರುಡಃ ಮಹತೋ

ವಿಷ್ಣೋರುಪರಿಭಾಗೇ ಧ್ವಜಾಗ್ರೇ ಸ್ಥಿತತ್ವೇನ ಮಹತಾಮತಿಕ್ರಮೋ ಮಮ ಜಾತ ಇತಿ ಶಂಕಾವಾನ್ ಇತ್ಯರ್ಥಃ । ಬಹುಗುಣಂ ಅನೇಕಸಂಖ್ಯಾಕಂ ಪ್ರಾಯಶ್ಚಿತ್ತಂ ಮಹದತಿಕ್ರಮಜನ್ಯಪಾಪಪರಿಹಾರಂ ಚಿಕೀರ್ಷುಃ ಸನ್ ಕರ್ತುಮಿಚ್ಛುಃ ಸನ್ ಅಂಹಃ ಸಂಹರ್ತುಃ ಶ್ರೀವಿಷ್ಣೋಃ ಪಾದಮೂಲೇ ದಶಭಿಃ ಮೂರ್ತಿಭಿಃ ದಶಸಂಖ್ಯಾಕವಿಗ್ರಹೈಃ ಧ್ವಜಾಗ್ರಾದಿತಿ ಶೇಷಃ, ಅವತೀರ್ಣಃ ಇತಿ । ಮಹದತಿಕ್ರಮೇ ಬಹುಸಂಖ್ಯಾಕಪ್ರಾಯಶ್ಚಿತ್ತಾನಿ ಕಾರ್ಯಾಣಿ, ಮಮ ಚ ಅತಿಮಹತಃ ಶ್ರೀವಿಷ್ಣೋರುಪರಿಭಾಗೇ ಸ್ಥಿತತ್ವೇನ ಅತಿಮಹದತಿಕ್ರಮೋ ಜಾತಃ । ಪ್ರಾಯಶ್ಚಿತ್ತೇಷು ಚ ನಮಸ್ಕಾರಸದೃಶಂ ಪ್ರಾಯಶ್ಚಿತ್ತಂ ನಾಸ್ತಿ । ತತೋ ದಶಭಿಃ ನಮಸ್ಕಾರೈಃ ದಶಪ್ರಾಯಶ್ಚಿತ್ತಾನಿ ಕರಿಷ್ಯಾಮಿ ಇತಿ ಬುದ್ಧ್ಯಾ ಗರುಡಃ ವಿಷ್ಣುಪಾದೇಷು ಯುಗಪತ್ ದಶಭಿಃ ವಿಗ್ರಹೈಃ ಪತಿತಃ ಇತಿ ಲೋಕಾನಾಂ ಗರುಡಪ್ರತಿಕೃತಯಃ ಭ್ರಾಂತಿಂ ಜನಯಂತೀತಿ ಭಾವಃ । ಅವಿಕಾರಿಷ್ವಪಿ ಈಶ್ವರನಖೇಷು ಈಶ್ವರಶಕ್ತ್ಯಾ ತಾತ್ಕಾಲಿಕಪ್ರಾಕೃತಾಂಶಪ್ರವೇಶಸಂಭವೇನ ತೇಷು ನಖಪ್ರವಿಷ್ಟೇಷು ಪ್ರಾಕೃತಾಂಶೇಷು ಗರುಡಪ್ರತಿಫಲನಂ ನಾಯುಕ್ತಮಿತಿದ್ರಷ್ಟವ್ಯಮ್ । ಭ್ರಾಂತಿಮಾನಲಂಕಾರಃ । ಭ್ರಾಂತಿಮಾನನ್ಯಸಂವಿತ್ತಿಸ್ತತ್ತುಲ್ಯಸ್ಯ ಚ ದರ್ಶನೇ ಇತಿ ಲಕ್ಷಣಾತ್ ॥೧೦॥

**ಅನ್ವಯ—** ಯತ್ರ ಚಿತ್ರಾಯಮಾಣಾಃ ಚಿತ್ರವರ್ಣಾಃ ಭಾಂತ್ಯಃ ಸೌಪರ್ಣ್ಯಃ ಪ್ರತಿಕೃತಯಃ ಅಧಿಕಾತಿಕ್ರಮಾಶಂಕಯಾ, ಬಹುಗುಣಂ ಪ್ರಾಯಶ್ಚಿತ್ತಂ ಚಿಕೀರ್ಷುಃ ಅಂಹಃ ಸಂಹರ್ತುಃ ಪಾದಮೂಲೇ ಸ್ವಯಂ ಇಹ ದಶಭಿಃ ಮೂರ್ತಿಭಿಃ ಸಃ ಅವತೀರ್ಣಃ ಇತಿ ಭ್ರಾಂತಿಮಾಜಂತಿ, ತಾದೃಶಾಃ ತಾರ್ಕ್ಷ್ಯಕೇತೋಃ ಪದನಖಮಣಯಃ ಅಸ್ಮಾನ್ ಪಾಂತು ।

**ಅರ್ಥ—** **ಯತ್ರ** = ಯಾವ ಶ್ರೀಮನ್ಮಹಾವಿಷ್ಣುವಿನ ಪಾದದ ಶ್ರೇಷ್ಠವಾದ ನಖರತ್ನಗಳಲ್ಲಿ, **ಚಿತ್ರಾಯಮಾಣಾಃ** = ಚಿತ್ರದಂತೆ ಕಾಣಿಸುತ್ತಿರುವ, **ಚಿತ್ರವರ್ಣಾಃ** = ಅನೇಕ ಬಣ್ಣಗಳುಳ್ಳ, **ಭಾಂತ್ಯಃ** = ಪ್ರಕಾಶಿಸುತ್ತಿರುವ, **ಸೌಪರ್ಣ್ಯಃ** = ಗರುಡನಿಗೆ ಸಂಬಂಧಪಟ್ಟಿರುವ, **ಪ್ರತಿಕೃತಯಃ** = ಪ್ರತಿಬಿಂಬಗಳು, **ಅಧಿಕಾತಿಕ್ರಮಾಶಂಕಯಾ**, **ಅಧಿಕ** = ತನಗಿಂತ, ಉತ್ತಮನಾದ ಶ್ರೀವಿಷ್ಣುವಿನ, **ಅತಿಕ್ರಮ** = ಮೀರಿಸುವಿಕೆಯ, **ಶಂಕಯಾ** = ಸಂದೇಹದಿಂದ, **ಬಹುಗುಣಂ** = ಅನೇಕಸಂಖ್ಯೆಯುಳ್ಳ, **ಪ್ರಾಯಶ್ಚಿತ್ತಂ** = ಪಾಪಶೋಧನವನ್ನು, **ಚಿಕೀರ್ಷುಃ** = ಮಾಡುವ ಇಚ್ಛೆಉಳ್ಳವನಾಗಿ, **ಅಂಹಃ ಸಂಹರ್ತುಃ** =

ಪಾಪಪರಿಹಾರಕನಾದ (ಶ್ರೀಹರಿಯ), ಪಾದಮೂಲೇ = ಚರಣದ ಬಳಿಯಲ್ಲಿ, ಸ್ವಯಂ = ತಾನೇ, ಇಹ = ಉಗುರುಗಳಲ್ಲಿ, ದಶಭಿಃ ಮೂರ್ತಿಭಿಃ = ಹತ್ತುರೂಪಗಳಿಂದ, ಸಃ = ಆ ಗರುಡನೇ, ಅವತೀರ್ಣಃ = ಅವತಾರವನ್ನು ಮಾಡಿದ್ದಾನೆ, ಇತಿ ಭ್ರಾಂತಿಂ = ಎಂಬ ಭ್ರಾಂತಿಯನ್ನು,ಆಜಂತಿ = ಹೊಂದಿಸುತ್ತವೆಯೋ(ಉಂಟುಮಾಡುತ್ತವೆಯೋ) ತಾದೃಶಾಃ ತಾರ್ಕ್ಷ್ಯಕೇತೋಃ ಪದನಖಮಣಯಃ = ಅಂತಹ ಗರುಡಧ್ವಜನಾದ ಶ್ರೀಹರಿಯ ಪಾದ-ನಖರತ್ನಗಳು, ಅಸ್ಮಾನ್ = ನಮ್ಮನ್ನು, ಪಾಂತು = ಕಾಪಾಡಲಿ.

ತಾತ್ಪರ್ಯ– ಸರ್ವೋತ್ತಮನಾದ ಶ್ರೀಮನ್ಮಹಾವಿಷ್ಣುವಿನ ಧ್ವಜದಲ್ಲಿ ಮೇಲ್ಭಾಗದಲ್ಲಿ ಗರುಡನು ವಿರಾಜಿಸುತ್ತಾನೆ. ಆದುದರಿಂದಲೇ ಶ್ರೀಹರಿಗೆ 'ಗರುಡಧ್ವಜ' ಎಂದು ಹೆಸರು. ಆದರೆ ಮಹಾವಿಷ್ಣುವಿಗಿಂತಲೂ ಮೇಲೆ ಇರುವುದರಿಂದ 'ನನಗೆ ಮಹಾತ್ಮರನ್ನು ಅತಿಕ್ರಮಿಸಿದ್ದರಿಂದ ಉಂಟಾದ ಪಾಪವು ಬಂದಿದೆ. ಮಹಾತ್ಮರ ಅತಿಕ್ರಮಣದ ಈ ಮಹಾಪಾಪಕ್ಕೆ ನಾನು ಮಹಾಪ್ರಾಯಶ್ಚಿತ್ತವನ್ನೇ ಮಾಡಿಕೊಳ್ಳಬೇಕು. ಪ್ರಾಯಶ್ಚಿತ್ತಗಳಲ್ಲೆಲ್ಲಾ ನಮಸ್ಕಾರಕ್ಕೆ ಸಮಾನವಾದ ಪ್ರಾಯಶ್ಚಿತ್ತವಿಲ್ಲ. ಆದ್ದರಿಂದ ಹತ್ತು ನಮಸ್ಕಾರಗಳನ್ನು ಮಾಡಿ ಹತ್ತು ಪ್ರಾಯಶ್ಚಿತ್ತಗಳನ್ನು ಮಾಡಿಕೊಳ್ಳುತ್ತೇನೆ' ಎಂದು ಆಲೋಚಿಸಿ ಗರುಡನು ಶ್ರೀಮನ್ಮಹಾವಿಷ್ಣುವಿನ ಎರಡು ಕಾಲುಗಳ ಹತ್ತು ಬೆರಳುಗಳ ಪ್ರಕಾಶಮಾನವಾದ ಹತ್ತು ಉಗುರುಗಳಲ್ಲಿಯೂ ಒಂದೇಬಾರಿ ಹತ್ತುರೂಪಗಳಿಂದ ಬಿದ್ದು (ಪ್ರತಿಫಲಿತನಾಗಿ) ನಮಸ್ಕಾರಮಾಡುತ್ತಾನೋ ಎಂಬಂತೆ ಗರುಡನ ಹತ್ತು ರೂಪಗಳು ಚಿತ್ರದ ರೂಪಗಳಂತೆ ನಾನಾ ಬಣ್ಣಗಳಿಂದ ಕೂಡಿ ಕಾಣಿಸುತ್ತಿವೆ. ರತ್ನದಂತಿರುವ ಅಂತಹ ನಖಗಳು ನಮ್ಮನ್ನು ಕಾಪಾಡಲಿ.

**ಹೃದ್ಯಂ ತಚ್ಚಿಂತಯಾಮಃ ಪರಮಪದಯುಗಂ ಸಾಧು ಯತ್ಸನ್ನಿಧಾನಾತ್**
**ಅತ್ಯುದ್ರಿಕ್ತೋರುಕಾಂತೇರ್ನಖಮಣಿನಿಕರಾನ್ನಿಷ್ಕಲಂಕೇಂದುಜಾಲಾತ್ ।**
**ನಿಷ್ಕ್ರಾಂತೋಽರ್ಚಿಷ್ಕಲಾಪೋ ಹೃದಯವರಕಮುದ್ದೀಪಯೇದ್ಧ್ವಾಂತಮಂತಃ**
**ಕೃಂತೇದ್ಭಿಂದ್ಯಾಚ್ಚ ತಾಪಂ ಭಯಮುಪಶಮಯೇದ್ದರ್ಶಯೇದಾಶು ತತ್ತ್ವಮ್ ॥೧೧॥**

**ವ್ಯಾಖ್ಯಾನ–** ಪಾದದ್ವಯಂ ಸ್ತೌತಿ ಶ್ಲೋಕದ್ವಯೇನ ಹೃದ್ಯಮಿತಿ ॥ ಯತ್ಸನ್ನಿಧಾನಾತ್ ಯಸ್ಮಿನ್ ಪದಯುಗೇ ಸನ್ನಿಧಾನಂ ಸಂಸ್ಥಿತಿಃ ಯಸ್ಯ ಸಃ ತಸ್ಮಾತ್, ಅತ್ಯುದ್ರಿಕ್ತೋರು-

ಕಾಂತೇಃ ಅತ್ಯುದ್ರಿಕ್ತಾ ಅತಿಪೂರ್ಣಾ ಉರ್ವೀ ಕಾಂತಿಃ ಯಸ್ಯ ತಸ್ಮಾತ್ ನಖಮಣಿ-ನಿಕರಾತ್ ನಖಾ ಏವ ಮಣಯಃ ತೇಷಾಂ ನಿಕರಃ ಸಮುದಾಯಃ ತಲ್ಲಕ್ಷಣಾತ್, ನಿಷ್ಕಲಂಕೇಂದುಜಾಲಾತ್, ನಿರ್ಗತಾಃ ಕಲಂಕಾಃ ಯೇಭ್ಯಃ ತೇ ಚ ತೇ ಇಂದವಶ್ಚ ತೇಷಾಂ ಜಾಲಾತ್, ಅಥವಾ ನಿಷ್ಕಲಂಕೇಂದುಜಾಲಾದಪಿ ಅತ್ಯುದ್ರಿಕ್ತೋರುಕಾಂತೇಃ ಅತಿಶಯಿತಕಾಂತೇಃ ನಖಮಣಿನಿಕರಾತ್ ಇತ್ಯರ್ಥಃ, ನಿಷ್ಠ್ಯೂತಃ ನಿರ್ಗತಃ ನಿಪೂರ್ವಾತ್ ಷ್ಠಿವು ನಿರಸನೇ ಇತ್ಯಸ್ಮಾತ್ ಕ್ತಪ್ರತ್ಯಯೇ ಛ್ವೋಃ ಶೂಡನುನಾಸಿಕೇ ಚ (೬-೪-೧೯) (ಸತುಕ್ಕಸ್ಯ ಛಸ್ಯ ವಸ್ಯ ಚ ಕ್ರಮಾತ್ ಶ ಊಠ್ ಏತೌ ಆದೇಶೌ ಸ್ತ ಃ ಅನುನಾಸಿಕೇ ಕ್ವೌ ಝಲಾದೌ ಚ ಕ್ಙಿತಿ) ಇತಿ ಊಠಿ ಯಣಾದೇಶೇ ಚ ನಿಷ್ಠ್ಯೂತ ಇತಿರೂಪಂ । ಅರ್ಚಿಷ್ಕಲಾಪಃ ಅರ್ಚಿಷಾಂ ಕಾಂತೀನಾಂ ಕಲಾಪಃ ಸಮುದಾಯಃ, ಅರ್ಚಿಸ್ತು ನ ಪುಮಾನ್ ಜ್ವಾಲರೋಚಿಷೋಃ ಇತಿನಾನಾರ್ಥರತ್ನಮಾಲಾ, 'ಕಲಾಪೋ ಭೂಷಣೇ ಬರ್ಹೇಕಾಂಬ್ಯಾಂಸಂಹತಿತೂಣಯೋಃ ಇತಿ ಚ । ಹೃದಯವರಕಂ ಹೃದಯಲಕ್ಷಣ-ಗರ್ಭಗೃಹಂ, ಗರ್ಭಾಗಾರಂ ವಾಸಗೃಹಮಿತ್ಯಮರವ್ಯಾಖ್ಯಾನೇ ಅಪವರಕಕೋಷ್ಠ-ಶಬ್ದಯೋರಪಿ ಶೇಷತ್ವೇನೋಕ್ತೇಃ, ಉದ್ದೀಪಯೇತ್ ಪ್ರಕಾಶಯಿತುಂ ಶಕ್ನುಯಾತ್, ಹೃದಯಪ್ರಕಾಶನಂ ನಾಮ ಹೃದಯೇ ಜ್ಞಾನೋತ್ಪಾದನಂ, ಅಂತರ್ಧ್ವಾಂತಂ ಅಜ್ಞಾನ-ಲಕ್ಷಣಂ ಕೃಂತೇತ್, ಛೇತ್ತುಂ ಶಕ್ನುಯಾತ್, ತಾಪಂ ಆಧ್ಯಾತ್ಮಿಕಾದಿತಾಪಂ ಭಿಂದ್ಯಾತ್ ಭೇತ್ತುಂ ಶಕ್ನುಯಾತ್, ಭಯಂ ಉಪಶಮಯೇತ್ ಶಮಯಿತುಂ ಶಕ್ನುಯಾತ್, ತತ್ತ್ವಂ ಭಗವತ್ತತ್ತ್ವಂ ಆಶು ಶೀಘ್ರಂ ದರ್ಶಯೇತ್, ಆಪರೋಕ್ಷ್ಯೇಣ ಜ್ಞಾಪಯಿತುಂ ಶಕ್ನುಯಾತ್ । ಉದ್ದೀಪಯೇದಿತ್ಯಾದಿಷು 'ಶಕಿಲಿಙ್ಚ' (೩-೩-೧೭೨) (ಶಕ್ತೌ ಲಿಙ್ಸ್ಯಾತ್ ಚಾತ್ ಕೃತ್ಯಾಃ, ತ್ವಂ ಭಾರಂ ವಹೇಃ) ಇತಿ ಲಿಙ್ । ತತ್ ಹೃದ್ಯಂ ಮನೋಹರಂ ಪರಮಪದಯುಗಂ ಪರಮಸ್ಯ ಸರ್ವೋತ್ತಮಸ್ಯ ವಿಷ್ಣೋಃ ಪಾದಯುಗಲಂ ಸಾಧು ಸಮ್ಯಕ್ ಚಿಂತಯಾಮಃ ಧ್ಯಾಯಾಮಃ ॥೧೧॥

**ಅನ್ವಯ**– ಯತ್ಸನ್ನಿಧಾನಾತ್ ಅತ್ಯುದ್ರಿಕ್ತೋರುಕಾಂತೇಃ ನಖಮಣಿನಿಕರಾತ್ ನಿಷ್ಕಲಂಕೇಂದುಜಾಲಾತ್, (ನಿಷ್ಕಲಂಕೇಂದುಜಾಲಾತ್ ಅತ್ಯುದ್ರಿಕ್ತೋರುಕಾಂತೇಃ ನಖಮಣಿನಿಕರಾತ್) ನಿಷ್ಠ್ಯೂತಃ ಅರ್ಚಿಷ್ಕಲಾಪಃ ಹೃದಯವರಕಂ ಉದ್ದೀಪಯೇತ್, ಅಂತಃಧ್ವಾಂತಂ ಕೃಂತೇತ್, ತಾಪಂ ಚ ಭಿಂದ್ಯಾತ್, ಭಯಂ ಉಪಶಮಯೇತ್, ತತ್ತ್ವಂ ಆಶು ದರ್ಶಯೇತ್, ತತ್ ಹೃದ್ಯಂ ಪರಮಪದಯುಗಂ ಸಾಧು ಚಿಂತಯಾಮಃ ।

**ಅನ್ವಯಾರ್ಥ–** **ಯತ್ಸನ್ನಿಧಾನಾತ್** = ಶ್ರೀವಿಷ್ಣುವಿನ ಯಾವ ಎರಡು ಪಾದಗಳಲ್ಲಿ ಸ್ಥಿತಿಯುಳ್ಳ, **ಅತ್ಯುದ್ರಿಕ್ತೋರುಕಾಂತೇಃ** = ಅತ್ಯಂತಪೂರ್ಣವಾದ ಬಹಳವಾದ ಕಾಂತಿ-ಯುಳ್ಳ, **ನಖಮಣಿನಿಕರಾತ್** = ಉಗುರುಗಳೆಂಬ ರತ್ನಗಳ ಸಮುದಾಯರೂಪವಾದ, **ನಿಷ್ಕಲಂಕೇಂದುಜಾಲಾತ್** = ಕಲಂಕವಿಲ್ಲದ ಚಂದ್ರರ ಸಮೂಹದ ದೆಸೆಯಿಂದ (ಕಲಂಕ-ವಿಲ್ಲದ ಚಂದ್ರರ ಸಮುದಾಯಕ್ಕಿಂತಲೂ ಅತ್ಯಂತ ಪೂರ್ಣವಾದ ಉತ್ಕೃಷ್ಟಕಾಂತಿಯುಳ್ಳ ಉಗುರುಗಳೆಂಬ ರತ್ನಗಳ ಸಮುದಾಯದ ದೆಸೆಯಿಂದ), **ನಿಷ್ಠ್ಯೂತಃ** = ಹೊರಸೂಸಿದ, **ಅರ್ಚಿಷ್ಕಲಾಪಃ** = ಕಾಂತಿಸಮುದಾಯವು, **ಹೃದಯವರಕಂ** = ಅಂತಃಕರಣವೆಂಬ ಗರ್ಭಗೃಹವನ್ನು (ಕೋಣೆಯನ್ನು) **ಉದ್ದೀಪಯೇತ್** = ಪ್ರಕಾಶಗೊಳಿಸಲು ಸಮರ್ಥ-ವಾದೀತು (ಸಮರ್ಥವಾಗಿಯೇ ಆಗುತ್ತದೆ) **ಅಂತಃ ಧ್ವಾಂತಂ** = ಅಜ್ಞಾನವೆಂಬ ಕತ್ತಲೆ-ಯನ್ನು, **ಕೃಂತೇತ್** = ಕತ್ತರಿಸಲು ಸಮರ್ಥವಾದೀತು, **ತಾಪಂ ಚ** = ಆಧ್ಯಾತ್ಮಿಕಾದಿ ಮೂರುವಿಧ ತಾಪವನ್ನು, **ಭಿಂದ್ಯಾತ್** = ನಾಶಗೊಳಿಸಲು ಸಮರ್ಥವಾದೀತು, **ಭಯಂ ಉಪಶಮಯೇತ್** = ಭೀತಿಯನ್ನು ಹೋಗಲಾಡಿಸಲು ಸಮರ್ಥವಾದೀತು, **ತತ್ತ್ವಂ**= ಭಗವಂತನ ನಿಜಸ್ವರೂಪವನ್ನು, **ಆಶು** = ಬೇಗನೆ, **ದರ್ಶಯೇತ್** = ಪ್ರತ್ಯಕ್ಷವಾಗಿ ತೋರಿಸಲು ಸಮರ್ಥವಾದೀತು, **ತತ್** = ಅಂತಹ, **ಹೃದ್ಯಂ** = ಮನೋಹರವಾದ, **ಪರಮಪದಯುಗಂ** = ಸರ್ವೋತ್ತಮನಾದ ಶ್ರೀಮಹಾವಿಷ್ಣುವಿನ ಎರಡುಪಾದಗಳನ್ನು, **ಸಾಧು** = ಚೆನ್ನಾಗಿ, **ಚಿಂತಯಾಮಃ** = ಧ್ಯಾನಿಸುತ್ತೇವೆ.

**ತಾತ್ಪರ್ಯ–** ಈ ಶ್ಲೋಕ ಮತ್ತು ಮುಂದಿನ ಶ್ಲೋಕ ಎರಡರಿಂದ ಪರಮಾತ್ಮನ ಎರಡು ಪಾದಗಳನ್ನು ಸ್ತುತಿಸುತ್ತಾರೆ. ಪರಮಾತ್ಮನ ಎರಡು ಪಾದಗಳಲ್ಲಿ ಹತ್ತು ನಖಗಳು(ಉಗುರುಗಳು) ನೆಲೆಸಿವೆ. ಅತಿಪೂರ್ಣವಾದ ಉತ್ಕೃಷ್ಟಕಾಂತಿಯುಳ್ಳ ಆ ಉಗುರುಗಳು ಕಲಂಕವಿಲ್ಲದ ಚಂದ್ರ ಸಮುದಾಯದಂತಿವೆ. ವಾಸ್ತವವಾಗಿ ಕಲಂಕವಿಲ್ಲದ ಚಂದ್ರಸಮುದಾಯಕ್ಕಿಂತಲೂ ಹೆಚ್ಚು ಕಾಂತಿಪೂರ್ಣವಾಗಿವೆ. ಅಂತಹ ಉಗುರುಗಳ ಸಮುದಾಯವು ನಿರಂತರವಾಗಿ ಕಾಂತಿಸಮೂಹವನ್ನು ಹೊರಚೆಲ್ಲುತ್ತಾ ಇರುತ್ತದೆ. ಈ ಕಾಂತಿಸಮೂಹವು ನಮ್ಮ ಅಂತಃಕರಣವೆಂಬ ಗರ್ಭಗೃಹವನ್ನು ಪ್ರಕಾಶಗೊಳಿಸಲು ಸಮರ್ಥವಾಗಿದೆ, ಅಜ್ಞಾನವೆಂಬ ಕತ್ತಲೆಯನ್ನು ಕತ್ತರಿಸುತ್ತದೆ. ದೇಹದ ಭೌತಿಕವಾದ ಮತ್ತು ದೈವಿಕವಾದ ತಾಪಗಳನ್ನು ನಾಶಗೊಳಿಸುತ್ತದೆ, ಭಯವನ್ನು ದೂರಮಾಡುತ್ತದೆ.

ಬಹಳ ಬೇಗನೆ ಭಗವಂತನ ಸ್ವರೂಪವನ್ನು ಒಳಗಣ್ಣಿಗೆ ಕಾಣಿಸುವಂತೆ ಮಾಡುತ್ತದೆ. ಇಂತಹ ಎಲ್ಲಾ ಸಾಮರ್ಥ್ಯಗಳನ್ನು ಒಳಗೊಂಡಿದೆ. ಸರ್ವೋತ್ತಮನಾದ ಶ್ರೀಮನ್ಮಹಾವಿಷ್ಣುವಿನ ಇಂತಹ ಉಗುರುಗಳಿಗೆ ಆಶ್ರಯವಾದ ಎರಡು ಪಾದಗಳನ್ನು ನಾವು ಚೆನ್ನಾಗಿ ಧ್ಯಾನ ಮಾಡುತ್ತೇವೆ.

ಚೀರ್ಣಂ ಪುಣ್ಯಂ ಸುತೀರ್ಣಂ ವೃಜಿನಮಪಜಿತಾಃ ಶತ್ರವಃ ಕ್ಷೇತ್ರಜಾ ಯೈಃ
ಹೃತ್ಪದ್ಮಂ ತತ್ಪದಾಬ್ಜದ್ಯುತಿಭಿರಹರಹಃ ಕ್ಷಾಲ್ಯತೇ ಕ್ಷೋದಿತಾಘೈಃ ।
ಧನ್ಯೈರ್ವಿನ್ಯಸ್ಯಮಾನೇ ಮನಸಿ ಮುನಿಜನೈಃ ಸ್ವಾರ್ಜಿತಂ ಕರ್ಮಭರ್ಮ
ಸ್ವೋಜೋಜಾಲೋಜ್ಜ್ವಲೇಽಸ್ಮಿನ್ ಜ್ವಲನ ಇವ ವಿಶುದ್ಧ್ಯರ್ಥಮಧ್ಯರ್ಪಯಾಮಃ ॥೧೨॥

ವ್ಯಾಖ್ಯಾನ– ಚೀರ್ಣಮಿತಿ ॥ ಯೈಃ ಪುರುಷೈಃ ಹೃತ್ಪದ್ಮಂ ಹೃದಯಲಕ್ಷಣಪದ್ಮಂ, ತತ್ಪದಾಬ್ಜದ್ಯುತಿಭಿಃ ತಸ್ಯ ವಿಷ್ಣೋಃ ಪಾದಕಮಲಕಾಂತಿಭಿಃ ಅಹರಹಃ ಪ್ರತಿದಿನಂ ಕ್ಷಾಲ್ಯತೇ ವಿಶೋಧ್ಯತೇ, ತತ್ಪಾದಕಮಲಧ್ಯಾನೇನ ಯೇಽಂತಃಕರಣಂ ಶೋಧಯಂತೀ–ತ್ಯರ್ಥಃ, ತೈಃ ಪುಣ್ಯಂ ಚೀರ್ಣಂ ಆಚರಿತಂ, ವೃಜಿನಂ ಪಾಪಂ ಚ ಸುತೀರ್ಣಂ ಅತ್ಯಂತಂ ಪರಿಹೃತಂ, ಕ್ಷೇತ್ರಜಾಃ ಶರೀರೇ ಜಾತಾಃ ಶತ್ರವಃ ಕಾಮಕ್ರೋಧಾದಯಃ ವೈರಿಣಃ ಅಪಜಿತಾಃ ಪರಾಜಿತಾಃ । ಕ್ಷೋದಿತಾಘೈಃ ಚೂರ್ಣೀಕೃತಪಾಪೈಃ ಧನ್ಯೈಃ ಕೃತಕೃತ್ಯೈ–ರ್ಮುನಿಜನೈಃ ಮನಸಿ ಅಂತಃಕರಣೇ ವಿನ್ಯಸ್ಯಮಾನೇ ವಿಶೇಷೇಣ ಸ್ಥಾಪ್ಯಮಾನೇ ಇತಿ ಯಾವತ್, ಸ್ವೋಜೋಜಾಲೋಜ್ಜ್ವಲೇ ಶೋಭನಾನಾಂ ಓಜಸಾಂ ಕಾಂತೀನಾಂ 'ಓಜಃ ಶಬ್ದಗುಣೇಃ ಜ್ಞಾನೇ ಬಲೇ ಗರ್ವಪ್ರಕಾಶಯೋಃ' ಇತಿ ನಾನಾರ್ಥರತ್ನಮಾಲಾ, ಜಾಲೇನ ಸಮುದಾಯೇನ ಉಜ್ಜ್ವಲೇ ಪ್ರಕಾಶಮಾನೇ ಅಸ್ಮಿನ್ ವಿಷ್ಣುಪಾದಾಬ್ಜೇ, ಸ್ವಾರ್ಜಿತಂ ಸ್ವೇನ ಸಂಪಾದಿತಂ ಕರ್ಮಭರ್ಮ, ಕರ್ಮಲಕ್ಷಣಂ ಸುವರ್ಣಂ, ತಪನೀಯಂ ಶಾತಕುಂಭಂ ಗಾಂಗೇಯಂ ಭರ್ಮಕರ್ಬುರಂ ಇತ್ಯಮರಃ, ಜ್ವಲನ ಇವ ಅಗ್ನಾವಿವ ವಿಶುದ್ಧ್ಯರ್ಥಂ ವಿಶೇಷೇಣ ಶುದ್ಧಯೇ ಅಧ್ಯರ್ಪಯಾಮಃ ಸಮರ್ಪಯಾಮಃ । ಋ ಗತೌ ಇತಿಧಾತೋಃ ಣಿಚಿ ಅರ್ತಿಹ್ರೀತ್ಯಾದಿನಾ (ಅರ್ತಿಹ್ರೀವ್ಲೀರೀಕ್ನೂಯಿಕ್ಷ್ಮಾಯ್ಯಾತಾಂ ಪುಗ್ಣೌ) (೭–೩–೩೬) ಪುಕಿ ಲಟ್ । ಯಥಾ ಸುವರ್ಣಸ್ಯ ಅಗ್ನಿ ಸಮರ್ಪಣೇನ ಶುದ್ಧಿರ್ಜಾಯತೇ ತಥಾ ಕರ್ಮಣಃ ವಿಷ್ಣುಪಾದಸಮರ್ಪಣೇನ ಅಕ್ಷಯಮೋಕ್ಷಜನ–ಕತ್ವಲಕ್ಷಣಶುದ್ಧಿರ್ಜಾಯತೇ ಇತ್ಯರ್ಥಃ । ಕರ್ಮಣೋ ವಿಷ್ಣುಪಾದಸಮರ್ಪಣೇನ

ಮೋಕ್ಷಜನಕತ್ವಂ ಚ–'ತಪಸ್ವಿನೋ ದಾನಪರಾ ಯಶಸ್ವಿನೋ ಮನಸ್ವಿನೋ ಮಂತ್ರವಿದಃ ಸುಮಂಗಲಾಃ । ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥' (ಭಾಗವತಂ) ಇತ್ಯಾದಿಪ್ರಮಾಣಸಿದ್ಧಂ। ॥೧೨॥

**ಅನ್ವಯ–** ಯೈಃ ಹೃತ್ಪದ್ಮಂ ತತ್ಪದಾಬ್ಜದ್ಯುತಿಭಿಃ ಅಹರಹಃ ಕ್ಷಾಲ್ಯತೇ, ತೈಃ ಪುಣ್ಯಂ ಚೀರ್ಣಂ, ವೃಜಿನಂ ಸುತೀರ್ಣಂ, ಕ್ಷೇತ್ರಜಾಃ ಶತ್ರವಃ ಅಪಜಿತಾಃ, ಕ್ಷೋದಿತಾಘೈಃ ಧನ್ಯೈಃ ಮುನಿಜನ್ಯೈಃ ಮನಸಿ ವಿನ್ಯಸ್ಯಮಾನೇ ಸ್ವೋಜೋಜಾಲೋಜ್ಜ್ವಲೇ ಅಸ್ಮಿನ್ ಸ್ವಾರ್ಜಿತಂ ಕರ್ಮಭರ್ಮ ಜ್ವಲನೇ ಇವ ವಿಶುದ್ಧ್ಯರ್ಥಂ ಅಧ್ಯರ್ಪಯಾಮಃ.

**ಅನ್ವಯಾರ್ಥ–** **ಯೈಃ** = ಯಾವ ಪುರುಷರಿಂದ, **ಹೃತ್ಪದ್ಮಂ** = ತಮ್ಮ ಹೃದಯ-ಕಮಲವು, **ತತ್ಪದಾಬ್ಜದ್ಯುತಿಭಿಃ** = ಅಂತಹ ಶ್ರೀಮನ್ಮಹಾವಿಷ್ಣುವಿನ ಪಾದಕಮಲಗಳ ಪ್ರಕಾಶಗಳಿಂದ, **ಅಹರಹಃ** = ಪ್ರತಿದಿನವೂ, **ಕ್ಷಾಲ್ಯತೇ** = ತೊಳೆಯಲ್ಪಡುತ್ತದೆಯೋ, **ತೈಃ** = ಅವರಿಂದ, **ಪುಣ್ಯಂ** = ಪುಣ್ಯವು, **ಚೀರ್ಣಂ** = ಆಚರಿಸಲ್ಪಟ್ಟಿತು, **ವೃಜಿನಂ** = ಪಾಪವೂ ಕೂಡ, **ಸುತೀರ್ಣಂ** = ಪೂರ್ಣವಾಗಿ ಪರಿಹರಿಸಲ್ಪಟ್ಟಿತು. **ಕ್ಷೇತ್ರಜಾಃ** = ಶರೀರದಲ್ಲಿಯೇ ಹುಟ್ಟಿದ, **ಶತ್ರವಃ** = ಕಾಮಕ್ರೋಧಾದಿಗಳು, **ಅಪಜಿತಾಃ** = ಸೋಲಿಸಲ್ಪಟ್ಟವು, **ಕ್ಷೋದಿತಾಘೈಃ** = ಪಾಪಗಳನ್ನು ಪುಡಿಮಾಡಿರುವ, **ಧನ್ಯೈಃ** = ಕೃತಕೃತ್ಯರಾದ, **ಮುನಿಜನ್ಯೈಃ** = ತಪಸ್ವಿಗಳಿಂದ, **ಮನಸಿ** = ಅಂತಃಕರಣದಲ್ಲಿ, **ವಿನ್ಯಸ್ಯಮಾನೇ** = ವಿಶೇಷವಾಗಿ ಸ್ಥಾಪಿಸಲ್ಪಡುವ (ಧ್ಯಾನಿಸಲ್ಪಡುವ) **ಸ್ವೋಜೋಜಾಲೋಜ್ಜ್ವಲೇ** = ಉತ್ತಮವಾದ ಕಾಂತಿಗಳ ಸಮುದಾಯದಿಂದ ಪ್ರಕಾಶಮಾನವಾದ, **ಅಸ್ಮಿನ್** = ಈ ವಿಷ್ಣುಪಾದ-ಕಮಲದಲ್ಲಿ, **ಸ್ವಾರ್ಜಿತಂ** = ನಮ್ಮಿಂದ ಸಂಪಾದಿಸಲ್ಪಟ್ಟ, **ಕರ್ಮಭರ್ಮ** = ಕರ್ಮವೆಂಬ ಚಿನ್ನವನ್ನು, **ಜ್ವಲನೇ ಇವ** = ಅಗ್ನಿಯಲ್ಲಿ ಎಂಬಂತೆ, **ವಿಶುದ್ಧ್ಯರ್ಥಂ** = ವಿಶೇಷವಾದ ಪವಿತ್ರತೆಗೋಸ್ಕರ, **ಅಧ್ಯರ್ಪಯಾಮಃ** = ಸಮರ್ಪಿಸುತ್ತೇವೆ.

**ತಾತ್ಪರ್ಯ–** ಯಾವ ಭಕ್ತರಾದ ಪುರುಷರು ತಮ್ಮ ಹೃದಯಕಮಲವನ್ನು ಶ್ರೀಹರಿಯಪಾದಪದ್ಮಗಳ ಕಾಂತಿಗಳಿಂದ ಪ್ರತಿದಿನವೂ ತೊಳೆಯುತ್ತಾರೋ, ಪ್ರತಿದಿನವೂ, ಎಡೆಬಿಡದೆ ತಮ್ಮ ಹೃದಯಕಮಲದಲ್ಲಿ 'ಪರಮಾತ್ಮನ ಪಾದಕಮಲಗಳು ತಮ್ಮ ಕಾಂತಿಯಿಂದ ನಮ್ಮ ಹೃದಯಕಮಲವನ್ನು ತೊಳೆಯುತ್ತಿವೆ' ಯೆಂದು ಧ್ಯಾನಮಾಡು-

ತ್ತಾರೋ, ಅವರು ಪುಣ್ಯವನ್ನು ಸಂಗ್ರಹಿಸಿದಂತಾಗುತ್ತದೆ. ಅವರ ಪಾಪವೆಲ್ಲವೂ ಪರಿಹಾರವಾಗುತ್ತದೆ. ದೇಹದ ಜೊತೆಗೆ ಹುಟ್ಟಿರುವ ಕಾಮಕ್ರೋಧಾದಿಶತ್ರುಗಳನ್ನು ಅವರು ಜಯಿಸಿದಂತಾಗುತ್ತದೆ. ಪಾಪಗಳನ್ನೆಲ್ಲಾ ಪುಡಿಮಾಡಿ ನಾಶಮಾಡಿಕೊಂಡಿರುವ ತಪಸ್ವಿಗಳು, ತನ್ನ ಸ್ವರೂಪವೇ ಆಗಿರುವ ಉಜ್ಜ್ವಲವಾದ ಕಾಂತಿಯಿಂದ ಕಂಗೊಳಿಸುವ ಈ ಪಾದಕಮಲಗಳನ್ನು ಯಾವಾಗಲೂ ತಮ್ಮ ಅಂತಃಕರಣದಲ್ಲಿ ಧ್ಯಾನಿಸುತ್ತಾ ಇರುತ್ತಾರೆ. ಶುದ್ಧಿಗಾಗಿ ಚಿನ್ನವನ್ನು ಬೆಂಕಿಯಲ್ಲಿ ಅರ್ಪಿಸುವಂತೆ ಅಂತಹ ಈ ವಿಷ್ಣುಪಾದಕಮಲದಲ್ಲಿ ನಾವು ಗಳಿಸಿದ ಪುಣ್ಯಕರ್ಮವೆಂಬ ಚಿನ್ನವನ್ನು ಅರ್ಪಿಸುತ್ತಿದ್ದೇವೆ. ('ತಪಸ್ವಿನೋ ದಾನಪರಾಃ' ಇತ್ಯಾದಿ ಪ್ರಮಾಣದಿಂದ ನಾವು ಮಾಡಿದ ಕರ್ಮಗಳನ್ನು ಹರಿಯಲ್ಲಿ ಅರ್ಪಿಸಿದರೆ ನಮಗೆ ಮೋಕ್ಷಕ್ಕೆ ಅನುಕೂಲಉಂಟಾಗುತ್ತದೆ, ಎಂದು ತಿಳಿದು ಬರುತ್ತದೆ.)

**ನಿತ್ಯೋಪಾಸ್ತ್ಯಾದರಾಭ್ಯಾಗತಗಿರಿಶಮುಖೋದಾರದೈತ್ಯಾರಿವಾರ-**
**ಪ್ರಾರಬ್ಧೋರುಪ್ರಣಾಮಾವಸರವಿತರಣೇ ಪ್ರೀತಿಹೇತೋಶ್ಚಚಾಲ ।**
**ಯಾವತ್ತಾವತ್ ಸಧರ್ಮಾಚರಣರತರಮಾರಮ್ಯಪಾದಾಗ್ರಲೀಲಾ**
**ಸಿಂಜನ್ಮಂಜೀರಮಂಜುಧ್ವನಿಪರಿಚರಿತಃ ಪಾತು ಮಾಂ ವಿಷ್ಣುಪಾದಃ ॥೧೩॥**

**ವ್ಯಾಖ್ಯಾನ–** ''ನಿತ್ಯಂ ಉಪಾಸ್ತಿಃ ಉಪಾಸನಾ ಸೇವಾ, ತಸ್ಯೈ ನಿತ್ಯಸೇವಾರ್ಥಂ ಇತ್ಯರ್ಥಃ, ಯದ್ಯಪಿ 'ಣ್ಯಾಸಶ್ರಂಥೋಯುಚ್' (೩-೩-೧೦೭) ಇತಿ ಯುಚಾ ಭಾವ್ಯಂ, ನ ಚ ವಾಸರೂಪನ್ಯಾಯೇನ ಕ್ತಿನ್ ಅಪಿ ಸ್ಯಾದಿತಿ ವಾಚ್ಯಂ । ಅಸ್ತ್ರಿಯಾಮಿತಿ ನಿಷೇಧಾತ್, ತಥಾಪಿ, ಡುಲಭಷ್ ಪ್ರಾಪ್ತೌ ಇತಿಧಾತೋಃ ಷಿತ್ವೇನ ಷಿದ್‌ಭಿದಾದಿಭ್ಯೋಽಙ್ (೩-೩-೧೦೪) ಇತಿಅಙ್, ಲಭಾ ಇತಿಪ್ರಯೋಕ್ತವ್ಯೇ 'ಅನರ್ಥಕಾಸ್ತು ಪ್ರತಿವರ್ಣಂ ಅರ್ಥಾನುಪಲಬ್ಧೇಃ' ಇತಿ ಕ್ತಿನ್ನಂತಪ್ರಯೋಗಸ್ಯ ಸಾಮಾನ್ಯಾಪೇಕ್ಷಜ್ಞಾಪಕತ್ವಾತ್, ಉಪಾಸ್ತಿರಿತಿ ಸಾಧು, ಆದರೇಣ ಅಭ್ಯಾಗತಾನಾಂ ಗಿರಿಶಮುಖಾನಾಂ ಮಹೇಶ-ಮಹೇಂದ್ರಪ್ರಭೃತೀನಾಂ ಉದಾರಾಣಾಂ ಉತ್ಕೃಷ್ಟಾನಾಂ ದೈತ್ಯಾರೀಣಾಂ ದೇವಾನಾಂ ವಾರಸ್ಯ ಸಮುದಾಯಸ್ಯ, ವಾರಃ ಸೂರ್ಯಾದಿದಿವಸೇ ಬೃಂದಾವಸರಯೋರಪಿ ಇತಿ ನಾನಾರ್ಥರತ್ನಮಾಲಾ, ಪ್ರಾರಬ್ಧಸ್ಯ ಪ್ರಕ್ರಾಂತಸ್ಯ ಉರುಪ್ರಣಾಮಸ್ಯ ಉತ್ಕೃಷ್ಟ-ನಮಸ್ಕಾರಸ್ಯ, ಧರ್ಮಪ್ರಾಧಾನ್ಯವಿವಕ್ಷಯಾ ದೇವಕರ್ತೃಕೋತ್ಕೃಷ್ಟನಮಸ್ಕಾರಾರಂಭಸ್ಯ

ಇತ್ಯರ್ಥಃ, ಅವಸರವಿತರಣೇ ಅವಸರದಾನಾರ್ಥಂ ತಾದರ್ಥ್ಯೇ ಸಪ್ತಮೀ, ಪ್ರೀತಿ-ಹೇತೋಃ ದೇವೇಷು ಪ್ರೀತ್ಯಾ ನಿಮಿತ್ತೇನ, ಯಾವತ್ ಯಸ್ಮಿನ್ ಕಾಲೇ ಚಚಾಲ ಚಲಿತವಾನ್, ಜ್ಞಾಪಯಿತುಂ ಸ್ವಚಲನರೂಪಸಂಕೇತಂ ಯದಾ ಚಕಾರ ಇತ್ಯರ್ಥಃ। ತಾವತ್ ತಸ್ಮಿನ್ ಏವ ಕಾಲೇ, ಸಧರ್ಮಸ್ಯ ಪತಿಧರ್ಮಸಮಾನಧರ್ಮಸ್ಯ, ಸಮಾನಸ್ಯ ಚ್ಛಂದಸ್ಯಮೂರ್ಧಪ್ರಭೃತ್ಯುದರ್ಕೇಷು (೬-೩-೮೪) ಇತ್ಯತ್ರ ವೃತ್ತಿಕೃತಾ 'ಸಮಾನಸ್ಯ' ಇತಿ ಯೋಗವಿಭಾಗಸ್ಯ ಕೃತತ್ವಾತ್ ಸಮಾನಶಬ್ದಸ್ಯ ಸಭಾವಃ ಆಚರಣೇ ರತಾಯಾಃ ಆಸಕ್ತಾಯಾಃ ರಮಾಯಾಃ ಲಕ್ಷ್ಮ್ಯಾಃ ರಮ್ಯಸ್ಯ ಪಾದಾಗ್ರಸ್ಯ ಲೀಲಯಾ ಚಲನ-ರೂಪಯಾ ಸಿಂಜತಃ ಧ್ವನಿಂ ಕುರ್ವತಃ ಮಂಜೀರಸ್ಯ ನೂಪುರಸ್ಯ, 'ಪಾದಾಂಗದಂ ತುಲಾಕೋಟಿಃ ಮಂಜೀರೋ ನೂಪುರೋಽಸ್ತ್ರಿಯಾಂ' ಇತ್ಯಮರಃ। ಮಂಜುಧ್ವನಿನಾ ರಮ್ಯನಾದೇನ, ಪರಿಚರಿತಃ ಸೇವಿತಃ, ಯದಾ ಶ್ರೀವಿಷ್ಣುನಾಪಾದಚಲನಂ ಕೃತಂ ತದಾ ಲಕ್ಷ್ಮೀಪಾದನೂಪುರೇ ಧ್ವನಿರುತ್ಪನ್ನಃ, ತೇನ ಧ್ವನಿನಾ ಶೋಭಿತಃ ಇತಿಭಾವಃ, ಶ್ರೀವಿಷ್ಣು-ಪಾದಃ ಮಾಂ ಪಾತು, ರಕ್ಷತು, ಪಾ ರಕ್ಷಣೇ ಇತ್ಯಸ್ಮಾತ್ ಕರ್ತರಿಲೋಟ್।

**ಅನ್ವಯ–** ನಿತ್ಯೋಪಾಸ್ತ್ಯಾದರಾಭ್ಯಾಗತಗಿರಿಶಮುಖೋದಾರದೈತ್ಯಾರಿವಾರ-ಪ್ರಾರಬ್ಧೋರುಪ್ರಣಾಮಾವಸರವಿತರಣೇ ಪ್ರೀತಿಹೇತೋಃ ಯಾವತ್ ಚಚಾಲ, ತಾವತ್ ಸಧರ್ಮಾಚರಣರತರಮಾರಮ್ಯಪಾದಾಗ್ರಲೀಲಾಸಿಂಜನ್ಮಂಜೀರಮಂಜುಧ್ವನಿಪರಿ-ಚರಿತಃ ವಿಷ್ಣುಪಾದಃ ಮಾಂ ಪಾತು।

**ಅನ್ವಯಾರ್ಥ–** ನಿತ್ಯೋಪಾಸ್ತ್ಯಾದರಾಭ್ಯಾಗತಗಿರಿಶಮುಖೋದಾರದೈತ್ಯಾರಿ-ವಾರಪ್ರಾರಬ್ಧೋರುಪ್ರಣಾಮಾವಸರವಿತರಣೇ, ನಿತ್ಯ = ನಿರಂತರವಾಗಿರುವ, ಉಪಾಸ್ತಿ = ಉಪಾಸನೆಗೋಸ್ಕರ, ಆದರ = ಭಕ್ತಿಯಿಂದ, ಅಭ್ಯಾಗತ = ಬಂದಿರುವ, ಗಿರಿಶಮುಖ = ಮಹೇಶಮಹೇಂದ್ರಮೊದಲಾದ, ಉದಾರ= ಶ್ರೇಷ್ಠರಾದ, ದೈತ್ಯಾರಿ = ದೇವತೆಗಳ, ವಾರ = ಸಮೂಹದಿಂದ, ಪ್ರಾರಬ್ಧ = ಪ್ರಾರಂಭಿಸಲ್ಪಟ್ಟ, ಉರುಪ್ರಣಾಮ = ಶ್ರೇಷ್ಠವಾದ ನಮಸ್ಕಾರಕ್ಕೆ, (ದೇವತೆಗಳು ಮಾಡುವ ಉತ್ಕೃಷ್ಟವಾದ ನಮಸ್ಕಾರದ ಆರಂಭಕ್ಕೆ) ಅವಸರವಿತರಣೇ = ಅವಕಾಶವನ್ನು ಕೊಡುವುದಕ್ಕೋಸ್ಕರ, ಪ್ರೀತಿಹೇತೋಃ = ದೇವತೆ-ಗಳಲ್ಲಿರುವ ಪ್ರೀತಿ ಎಂಬ ಕಾರಣದಿಂದ, ಯಾವತ್ ಚಚಾಲ = ಯಾವ ಸಮಯದಲ್ಲಿ

ಚಲಿಸಿತೋ, ತಾವತ್ = ಅದೇ ಸಮಯದಲ್ಲಿ, ಸಧರ್ಮಾಚರಣರತರಮಾರಮ್ಯ-ಪಾದಾಗ್ರಲೀಲಾಸಿಂಜನ್ಮಂಜೀರಮಂಜುಧ್ವನಿಪರಿಚರಿತಃ,ಸಧರ್ಮ = ಪತಿಗೆ ಸಮಾನ-ವಾದ ಧರ್ಮದ, ಆಚರಣ = ನಡೆಸುವಿಕೆಯಲ್ಲಿ, ರತ = ಆಸಕ್ತಳಾದ, ರಮಾ = ಲಕ್ಷ್ಮೀದೇವಿಯ, ರಮ್ಯ = ಮನೋಹರವಾದ, ಪಾದಾಗ್ರ = ಕಾಲಿನ ತುದಿಯ, ಲೀಲಾ = ವಿಲಾಸದಿಂದ, ಸಿಂಜತ್ = ಧ್ವನಿಗೈಯುತ್ತಿರುವ, ಮಂಜೀರ = ಕಾಲ್ಗೆಜ್ಜೆಯ, ಮಂಜು = ಇಂಪಾದ, ಧ್ವನಿ = ಸದ್ದಿನಿಂದ, ಪರಿಚರಿತಃ = ಸೇವಿಸಲ್ಪಟ್ಟ, ವಿಷ್ಣುಪಾದಃ = ಶ್ರೀಮನ್ಮಹಾ-ವಿಷ್ಣುವಿನ ಪಾದವು, ಮಾಂ = ನನ್ನನ್ನು, ಪಾತು = ಕಾಪಾಡಲಿ.

**ತಾತ್ಪರ್ಯ–** ಈ ಶ್ಲೋಕದಿಂದ ಬಹಳ ಗಂಭೀರಭಾವದಿಂದ ಧ್ವನಿಪೂರ್ಣವಾಗಿ ಶ್ರೀಹರಿಯಪಾದವನ್ನು ಪುನಃ ವರ್ಣಿಸುತ್ತಿದ್ದಾರೆ– ಮಹೇಶಮಹೇಂದ್ರ ಮೊದಲಾದ ದೇವಶ್ರೇಷ್ಠರು ನಿತ್ಯದಲ್ಲಿಯೂ ತಾವು ಮಾಡುವ ಪರಮಾತ್ಮನ ಪಾದ-ಪ್ರಣಾಮವೆಂಬ ಉಪಾಸನೆಗೋಸ್ಕರವಾಗಿ ಬಹಳ ಭಕ್ತಿಯಿಂದ ಗುಂಪು ಗುಂಪಾಗಿ ಬರುತ್ತಾರೆ. ತಮ್ಮ ತಾರತಮ್ಯಕ್ರಮದಿಂದ ಪರಮಾತ್ಮನ ಪಾದಪ್ರಣಾಮವನ್ನು ಆರಂಭಿಸುತ್ತಾರೆ. ಆಗ ಅವರಿಗೆ ಪಾದಸ್ಪರ್ಶಕ್ಕೆ ಅವಕಾಶಕೊಡುವುದಕ್ಕಾಗಿ ಬಹಳ ಪ್ರೀತಿಯಿಂದ ಶ್ರೀಹರಿಯ ಪಾದವು ಸ್ವಲ್ಪ ಮುಂದಕ್ಕೆ ಚಲಿಸುತ್ತದೆ, ಪರಮಾತ್ಮನು ತನ್ನ ಕಾಲನ್ನು ಸ್ವಲ್ಪ ಮುಂದೆ ಚಾಚುತ್ತಾನೆ. ಆಗ ಶ್ರೀಲಕ್ಷ್ಮೀದೇವಿಯು 'ನಾನೂ ಕೂಡ ಪತಿಸಮಾನಧರ್ಮವನ್ನು ಆಚರಿಸಬೇಕು, ದೇವತೆಗಳಿಗೆ ನನ್ನ ಪಾದಪ್ರಣಾಮದ ಅವಕಾಶವನ್ನು ಒದಗಿಸಬೇಕು, ವಿಷ್ಣುವಿನ ಪಾದದ ಜೊತೆಗೆ ನನ್ನ ಪಾದಕ್ಕೂ ಪ್ರಣಾಮ-ಮಾಡಿ ದೇವತೆಗಳು ಕೃತಕೃತ್ಯರಾಗಬೇಕು' ಎಂದು ಭಾವಿಸಿ, ತನ್ನ ಮನೋಹರವಾದ ಪಾದವನ್ನು ಮುಂದಕ್ಕೆ ಚಾಚುವಾಗ ಅದರ ತುದಿಯ ವಿಲಾಸದಿಂದಲೇ ಅವಳ ಕಾಲ್ಗೆಜ್ಜೆಗಳು (ಅಂದುಗೆಗಳು) ಇಂಪಾಗಿ, ಅಂದವಾಗಿ ಸದ್ದು ಮಾಡುತ್ತವೆ. ಈ ಸದ್ದಿನಿಂದ ಸೇವಿತವಾದ ಶ್ರೀಹರಿಯ ಪಾದವು ನನ್ನನ್ನು ಕಾಪಾಡಲಿ ಎಂದು ಭಾವ.

**ವಿಶೇಷಾಂಶ–** ದೇವತೆಗಳು ಪ್ರಣಾಮಮಾಡುವುದಕ್ಕಿಂತ ಮೊದಲು ಲಕ್ಷ್ಮೀ-ದೇವಿಯು ಭಗವಂತನ ಪಾದಗಳಿಗೆ ಪ್ರಣಾಮಪೂಜಾಮಾಡಿದಳೆಂದೂ ಲಕ್ಷ್ಮಿಯನ್ನು ಸೇರಿಸಿಕೊಂಡು ಪರಮಾತ್ಮನ ಉಪಾಸನೆಯನ್ನು ಮಾಡಬೇಕೆಂದೂ ಪರಮಾತ್ಮನ ಭಕ್ತರಿಗೆ

ಲಕ್ಷ್ಮಿಯು ತಾನೇ ತನ್ನ ಸೇವೆಯ ಸಂದರ್ಭವನ್ನು ಒದಗಿಸಿ ಕಾಪಾಡುವಳೆಂದೂ ಸೂಕ್ಷ್ಮಾಂಶಗಳು ಇದರಿಂದ ತಿಳಿದುಬರುತ್ತವೆ.

**ದಿಧ್ಯಾಸೋರ್ಧ್ವಾಂತಘಾತೋಪಹಿತನಿಜಮಹಃಸಂಭೃತಸ್ತಂಭಶೋಭಾಂ**
**ಬಿಭ್ರಾಣೇ ನಿಘ್ನತಾನ್ನಃ ಸ್ಮರಣಸರಣಿಕಾವಿಘ್ನಮೀಶಸ್ಯ ಜಂಘೇ ।**
**ಶ್ರೀಮಜ್ಜಾನುಪ್ರಭಾಮುಙ್ ಮಣಿಮುಕುರಶಿರಃಶೇಖರೇ ಶ್ರೀಕರಾಭ್ಯಾಂ**
**ಆರೋಪ್ಯಾಂಕಂ ವಿಪಂಕಂ ಪರಿಮೃದು ಮೃದಿತೇ ಶೇಷಪರ್ಯಂಕತೋ ಯೇ ॥೧೪॥**

**ವ್ಯಾಖ್ಯಾನ–** ಜಂಘೇಸ್ತೌತಿ–**ದಿಧ್ಯಾಸೋರಿತಿ ॥** ಯೇ, ದಿಧ್ಯಾಸೋಃ ಧ್ಯಾನೇಚ್ಛೋಃ ಪುರುಷಸ್ಯ, ಧ್ವಾಂತಘಾತೋಪಹಿತನಿಜಮಹಃಸಂಭೃತಸ್ತಂಭಶೋಭಾಂ, ಧ್ವಾಂತಸ್ಯ ಅಜ್ಞಾನಲಕ್ಷಣಸ್ಯ ತಮಸೋ ಘಾತಾಯ ವಿನಾಶಾಯ, ಉಪಹಿತಯೋಃ ಸ್ಥಾಪಿತಯೋಃ, ನಿಜಮಹಃಸಂಭೃತಯೋಃ ಸ್ವಾಭಾವಿಕತೇಜಃಪೂರ್ಣಯೋಃ, ಸ್ತಂಭಯೋಃ ಶೋಭಾಂ ಕಾಂತಿಂ, ಬಿಭ್ರಾಣೇ ದಧಾನೇ, ಯಥಾ ಕಿಂಚಿತ್‌ಕಠಿನದ್ರವ್ಯಂ ವಿನಾಶಯಿತುಂ ಸ್ತಂಭಃ ಉಪಾದೀಯತೇ ತಥಾ, ನಿವಾರ್ಯತ್ವೇನ, ಕಠಿನಮಜ್ಞಾನಂ ವಿನಾಶಯಿತುಂ ಪ್ರವೃತ್ತೌ ತೇಜಃಪೂರ್ಣಸ್ತಂಭಾವಿವದೃಶ್ಯಮಾನೌ ಇತ್ಯರ್ಥಃ । ಶ್ರೀಮಜ್ಜಾನುಪ್ರಭಾಮುಙ್‌ಮಣಿಮುಕುರಶಿರಃಶೇಖರೇ, ಪ್ರಭಾಂಮುಂಚತಃ ಇತಿ–ಪ್ರಭಾಮುಚೌ ಸ್ವಸ್ಮಾತ್‌ಸರ್ವತೋನಿಷ್ಕ್ರಾಮ್ಯಮಾನಪ್ರಭಾಯುಕ್ತಾವಿತ್ಯರ್ಥಃ, ತೌ ಚ ತೌ ಮಣಿಮುಕುರೌ 'ಮಣಿಮಯದರ್ಪಣೌ ದರ್ಪಣೇ ಮುಕುರಾದರ್ಶಾವಿ'ತ್ಯಮರಃ, ಶ್ರೀಮತೀ ಚ ತೇ ಜಾನುನೀ ಚ ಶ್ರೀಮಜ್ಜಾನುನೀ,ಶ್ರೀಮಜ್ಜಾನುನೀ ಏವ ಪ್ರಭಾಮುಙ್ ಮಣಿಮುಕುರೌ, ಶಿರಸಿ ವಿದ್ಯಮಾನಃ ಶೇಖರಃ ಶಿರಃಶೇಖರಃ, ಶಿರೋಗತಶಿಖಾಗತ–ಮಾಲಾ, 'ಶಿಖಾಸ್ವಾಪೀಡಶೇಖರೌ'ಇತ್ಯಮರಃ । ಶ್ರೀಮಜ್ಜಾನುಪ್ರಭಾಮುಙ್‌ಮಣಿ–ಮುಕುರಾವೇವಶಿರಃಶೇಖರೌ ಯಯೋಸ್ತೇ, ಶ್ರೀಕರಾಭ್ಯಾಂ ಲಕ್ಷ್ಮೀಕರಾಭ್ಯಾಂ, ಶೇಷಪರ್ಯಂಕತಃ ಶೇಷಲಕ್ಷಣಪರ್ಯಂಕಾತ್, ಪರ್ಯಂಕಾತ್ ಇತಿಪಂಚಮೀಬಲಾತ್ ನಿಷ್ಕ್ರಾಮ್ಯೇತಿಲಭ್ಯತೇ । ಅತಏವಲ್ಯಬ್‌ಲೋಪನಿಮಿತ್ತಾಪಂಚಮೀ । ಶೇಷಪರ್ಯಂಕಾತ್ ನಿಷ್ಕ್ರಾಮ್ಯೇತ್ಯರ್ಥಃ । ವಿಪಂಕಂ ವಿಪಾಪಂ, ಪಂಕೋಽಸ್ತ್ರೀಕರ್ದಮೈನಸೋರಿತಿನಾನಾರ್ಥ–ರತ್ನಮಾಲಾ, ಅಂಕಂ ಸ್ವಾಂಕಂ ಆರೋಪ್ಯ, ಸ್ವಾಂಕೋಪರಿಸ್ಥಾಪಯಿತ್ವೇತ್ಯರ್ಥಃ. ಆಙ್–ಪೂರ್ವಾತ್ ರುಹೇಃ ಣಿಜಂತಾತ್ ಲ್ಯಪ್ (ರುಹಃಪೋಽನ್ಯತರಸ್ಯಾಂ ೭–೩–೪೩ ಇತಿ

ಪಃ) ಪರಿಮೃದು ಅತಿಮೃದು ಯಥಾ ಭವತಿ ತಥಾ, ಮೃದಿತೇ ಸಂವಾಹಿತೇ ತೇ ಜಂಘೇ ನಃ ಅಸ್ಮಾಕಂ ಸ್ಮರಣಸರಣಿಕಾವಿಘ್ನಂ ಸ್ಮರಣಾನಾಂ ಶ್ರೀವಿಷ್ಣುಸ್ತುತೀನಾಂ ಸರಣಿಕಾ ಪಂಕ್ತಿಃ, ಸ್ಮರಣಧಾರೇತಿಯಾವತ್, ಸರಣಿಃ ಪಂಕ್ತಿವರ್ತ್ಮನೋಃ ಇತಿನಾನಾರ್ಥರತ್ನಮಾಲಾ, ಸರಣಿರೇವಸರಣಿಕಾ ಸ್ವಾರ್ಥೇ ಕಪ್ರತ್ಯಯಃ, ತಸ್ಯಾಃ ವಿಘ್ನಂ ಪ್ರತಿ, ನಿಘ್ನತಾಂ ನಿಘ್ನವತ್ ನಿಹಂತೃವತ್ ಆಚರತಾಂ, ವಿಘ್ನಹನನಂ ಕುರುತಾಂ ಇತ್ಯರ್ಥಃ । ನಿಪೂರ್ವಾತ್ ಹಂತೇಃ ಘಞರ್ಥೇ ಕವಿಧಾನಂ ಇತಿ ಕರ್ತರಿ ಕಪ್ರತ್ಯಯೇ ಗಮಹನಜನಖನಘಸಾಂ ಲೋಪಃ ಕ್ಙಿತ್ಯನಙಿ (೬-೪-೯೮) ಇತಿ ಉಪಧಾಲೋಪೇ, ಹೋಹಂತೇಃ ಞ್ಣಿನ್ನೇಷು (೭-೩-೫೪) ಇತಿ ಕುತ್ವೇ ನಿಘ್ನ ಇತಿರೂಪಂ । ತಸ್ಮಾತ್ ಸರ್ವಪ್ರಾತಿಪದಿಕೇಭ್ಯಃ ಕ್ವಿಪ್ (ಆಚಾರೇ) ವಾ ವಕ್ತವ್ಯಃ ಇತಿ ಆಚಾರಾರ್ಥೇ ಕ್ವಿಪಿ 'ಸನಾದ್ಯಂತಾ ಧಾತವಃ (೩-೧-೩೨) ಇತಿ ಧಾತುಸಂಜ್ಞಾಯಾಂ ಕರ್ತರಿ ಲೋಟ್ ಪ್ರಥಮಪುರುಷದ್ವಿವಚನಂ । ತೇನ ನಿ-ಪೂರ್ವಾತ್ ಹಂತೇಃ ಲೋಟಿ ಪ್ರಥಮಪುರುಷ ದ್ವಿವಚನೇ ಅನುದಾತ್ತೋಪದೇಶ-ವನತಿತನೋತ್ಯಾದೀನಾಂ ಅನುನಾಸಿಕಲೋಪಃ ಝಲಿ ಕ್ಙಿತಿ (೬-೪-೩೭) ಇತಿ ಅನುನಾಸಿಕಲೋಪೇ ನಿಹತಾಮಿತಿಭಾವ್ಯಮಿತಿ ಚೋದ್ಯಾನವಕಾಶಃ ॥೧೪॥

**ಅನ್ವಯ-** ದಿಧ್ಯಾಸೋಃ ಧ್ವಾಂತಘಾತೋಪಹಿತನಿಜಮಹಃಸಂಭೃತಸ್ತಂಭಶೋಭಾಂ ಬಿಭ್ರಾಣೇ, ಶ್ರೀಮಜ್ಜಾನುಪ್ರಭಾಮುಙ್‌ಮಣಿಮುಕುರಶಿರಃಶೇಖರೇ ಶ್ರೀಕರಾಭ್ಯಾಂ ಶೇಷಪರ್ಯಂಕತಃ ವಿಪಂಕಂ ಅಂಕಂ ಆರೋಪ್ಯ, ಪರಿಮೃದು ಮೃದಿತೇ ಯೇ ಜಂಘೇ, ತೇ, ನಃ ಸ್ಮರಣಸರಣಿಕಾವಿಘ್ನಂ ನಿಘ್ನತಾಮ್ ।

**ಅನ್ವಯಾರ್ಥ–** ದಿಧ್ಯಾಸೋಃ = ಧ್ಯಾನಮಾಡುವ ಇಚ್ಛೆಯುಳ್ಳ ಭಕ್ತನ, ಧ್ವಾಂತ-....ಶೋಭಾಂ, ಧ್ವಾಂತ =ಅಜ್ಞಾನವೆಂಬ ಕತ್ತಲೆಯ, ಘಾತ =ನಾಶಕ್ಕೋಸ್ಕರ, ಉಪಹಿತ =ಸ್ಥಾಪಿತವಾದ, ನಿಜಮಹಃಸಂಭೃತ = ಸ್ವಾಭಾವಿಕ ತೇಜಸ್ಸಿನಿಂದ ಪೂರ್ಣ-ವಾದ, ಸ್ತಂಭ = ಎರಡು ಕಂಭಗಳ, ಶೋಭಾಂ = ಕಾಂತಿಯನ್ನು, ಬಿಭ್ರಾಣೇ = ಧರಿಸಿ-ರುವ, ಶ್ರೀಮಜ್ಜಾನು.... ಶೇಖರೇ, ಶ್ರೀಮತ್ = ಕಾಂತಿಯುಕ್ತವಾದ, ಜಾನು = ಎರಡು ಮಂಡಿಗಳೆಂಬ (ಮೊಣಕಾಲುಗಳೆಂಬ), ಪ್ರಭಾಮುಕ್ = ಕಾಂತಿಯನ್ನು ಸೂಸುತ್ತಿರುವ, ಮಣಿಮುಕುರ = ರತ್ನದ ಕನ್ನಡಿಗಳೇ, ಶಿರಃಶೇಖರೇ = ಶಿರಸ್ಸಿನ ಪುಷ್ಪಮಾಲೆಯಾಗಿ ಉಳ್ಳ,

**ಶ್ರೀಕರಾಭ್ಯಾಂ** = ಲಕ್ಷ್ಮೀದೇವಿಯ ಎರಡು ಕೈಗಳಿಂದ, **ಶೇಷಪರ್ಯಂಕತಃ** = ಶೇಷನೆಂಬ ಹಾಸಿಗೆಯಿಂದ (ನಿಷ್ಕಾಸ್ಯ=ಮೇಲಕ್ಕೆತ್ತಿ), **ವಿಪಂಕಂ** = ಪಾಪರಹಿತವಾದ, **ಅಂಕಂ** = ತನ್ನ ತೊಡೆಯನ್ನು, **ಆರೋಪ್ಯ** = ಏರಿಸಿ, **ಪರಿಮೃದು** = ಬಹಳಮೆತ್ತಗೆ, **ಮೃದಿತೇ** = ಒತ್ತಲ್ಪಟ್ಟ, **ಈಶಸ್ಯ** = ಶ್ರೀಹರಿಯ, **ಯೇ ಜಂಘೇ** = ಯಾವ ಎರಡು ಜಂಘೇ (ಕಣಕಾಲು) ಗಳಿವೆಯೋ, **ತೇ** = ಅವೆರಡೂ, **ನಃ** = ನಮ್ಮ, **ಸ್ಮರಣಸರಣಿಕಾವಿಘ್ನಂ** = (ಶ್ರೀಹರಿಯ) ಸ್ಮರಣಧಾರೆಯ ವಿಘ್ನವನ್ನು, **ನಿಘ್ನತಾಂ** = ಪರಿಹರಿಸಲಿ, (ಕಾಲಿನ ಹರಡಿನಿಂದ ಮಂಡಿವರೆಗೆ ಇರುವಭಾಗ ಕಣಕಾಲು = ಜಂಘಾ, ತೊಡೆ ಮತ್ತು ಕಣಕಾಲುಗಳ ಸಂಧಿ, ಮಂಡಿ=ಜಾನು).

**ತಾತ್ಪರ್ಯ**– ಈಗ ಪರಮಾತ್ಮನ ಎರಡು ಕಣಕಾಲುಗಳನ್ನು ವರ್ಣಿಸುತ್ತಾರೆ. ಶ್ರೀಮನ್ಮಹಾವಿಷ್ಣುವಿನ ಧ್ಯಾನವನ್ನು ಮಾಡಲು ಬಯಸುವ ಭಕ್ತನ ಅಜ್ಞಾನವೆಂಬ ಘನೀಭೂತವಾದ ಕತ್ತಲೆಯನ್ನು ನಾಶಮಾಡುವ ಸಲುವಾಗಿ ಆಮೂಲಾಗ್ರವಾಗಿ ಸ್ವಾಭಾವಿಕಪ್ರಕಾಶಪೂರ್ಣವಾದ ಎರಡು ದೀಪದಕಂಭಗಳನ್ನು ಇಟ್ಟಿರುವಂತೆ ಪರಮಾತ್ಮನ ಎರಡು ಕಣಕಾಲುಗಳು ಶೋಭಿಸುತ್ತಿವೆ. ಗಟ್ಟಿಯಾದ ಕಲ್ಲಿನ ತುಂಡು ಮುಂತಾದ್ದನ್ನು ಒಡೆಯಲು ಉಪಯೋಗಿಸುವ ಗಟ್ಟಿಯಾದ ಕೊಡತಿಗೆಯಂತೆ ಪರಮಾತ್ಮನ ಎರಡುಕಾಲುಗಳಿವೆ. ಆ ಕಣಕಾಲುಗಳೆರಡರ ಮೇಲ್ಭಾಗದಲ್ಲಿರುವ ಎರಡು ಮೊಣ-ಕಾಲುಗಳು (ಮಂಡಿಗಳು) ಕಾಂತಿಯನ್ನು ಹೊರಸೂಸುವ ರತ್ನದ ಎರಡು ಕನ್ನಡಿಗಳಂತಿವೆ. ಕಣಕಾಲುಗಳು ಅಂತಹ ಮೊಣಕಾಲುಗಳಿಂದ ಶಿರೋಭಾಗದ ಅಲಂಕಾರವನ್ನು ಹೊಂದಿದಂತೆ ಇವೆ. ಇಂತಹ ಎರಡು ಕಣಕಾಲುಗಳು ಶೇಷನೆಂಬ ಮಂಚದ ಮೇಲಿರುತ್ತವೆ. ಶ್ರೀಲಕ್ಷ್ಮೀದೇವಿಯು ತನ್ನೆರಡು ಕೈಗಳಿಂದ ಅವುಗಳನ್ನೆತ್ತಿ ತನ್ನ ತೊಡೆಯ ಮೇಲಿಟ್ಟುಕೊಂಡು ಬಹಳ ಮೆದುವಾಗಿ ಒತ್ತುತ್ತಾ ಇರುತ್ತಾಳೆ. ಪರಮಾತ್ಮನ ಇಂತಹ ಎರಡು ಕಣಕಾಲುಗಳು ಆ ಪರಮಾತ್ಮನ ನಿರಂತರಸ್ಮರಣಧಾರೆಗೆ ಬರತಕ್ಕ ತೊಂದರೆಯನ್ನು ಪರಿಹರಿಸಲಿ. ಸ್ಮರಣೆಯ ದಾರಿಯಲ್ಲಿ ಬರುವ ಕತ್ತಲನ್ನು ನಾಶಪಡಿಸಿ ಬೆಳಕನ್ನು ಬೀರಿ ನಮ್ಮ ಧ್ಯಾನವು ಮುಂದುವರೆಯುವಂತೆ ಅನುಗ್ರಹಿಸಲಿ.

**ಸೌಂದರ್ಯಂ ಸೌಕುಮಾರ್ಯಂ ಬಲಮತಿಬಹುಲಂ ತೇಜ ಓಜಃ ಪ್ರತಾಪ-**

**ಸ್ತಾರುಣ್ಯಂ ಚೇತ್ಯಮೀಷಾಮಹಮಹಮಿಕಯೇವಾತಿಸಂಬಾಧಯೋಗಾತ್ ।**

**ಅಂತಃಪೂರ್ತೇರ್ದ್ರಢಿಷ್ಠಾವಪಿ ಪರಿಮೃದುಲೌ ಪೀವರೌ ದಾರಿತಾರೇರೂರೂ ದೂರೀಕ್ರಿಯಾಸ್ತಾಂ ದುರಿತಮರಮಧೀಮೇದುರಂ ಮೇ ದುರಂತಮ್ ॥೧೫॥**

**ವ್ಯಾಖ್ಯಾನ–** ಊರೂ ಸ್ತೌತಿ– **ಸೌಂದರ್ಯಮಿತಿ ॥** ಸೌಂದರ್ಯಂ ಸುಂದರತ್ವಂ, ಸೌಕುಮಾರ್ಯಂ ಸುಕುಮಾರತ್ವಂ, ಕೋಮಲತ್ವಮಿತಿಯಾವತ್, ಅತಿಬಹುಲಂ ಪರಮಮಹತ್ ಬಲಂ ಶಕ್ತಿಃ, ದ್ರವಿಣಂ ತರಃ ಸಹೋ ಬಲಶೌರ್ಯಾಣಿ ಸ್ಥಾಮ ಶುಷ್ಮಂ ಚ । ಶಕ್ತಿಃ ಪರಾಕ್ರಮಃ ಪ್ರಾಣಃ ಇತ್ಯಮರಃ । ತೇಜಃ ಕಾಂತಿಃ ಓಜೋ ಜ್ಞಾನಂ ತೇಜೋ ಬಲೇ ಪ್ರತಾಪೇಽಗ್ನೌ ತ್ರಿಷು ವೇತಸಿ, ಇತಿರತ್ನಮಾಲಾ, ಓಜಃ ಶಬ್ದಗುಣೇ ಜ್ಞಾನೇ ಬಲೇ ಗರ್ವಪ್ರಕಾಶಯೋಃ ಇತಿ ಚ, ಪ್ರತಾಪಃ ಪರಾಕ್ರಮಃ ತಾರುಣ್ಯಂ ಯೌವನಂ, ಇತಿಶಬ್ದಃ ಪ್ರಭೃತ್ಯರ್ಥೇ, ಏತದಾದೀನಾಂ ಗುಣಾನಾಂ ಅಹಮಹಮಿಕಯಾ ಇವ ಪರಸ್ಪರಾ-ಹಂಕಾರೇಣೇವ, ಅಹಮಹಮಿಕಾ ತು ಸಾ ಸ್ಯಾತ್ ಪರಸ್ಪರಂ ಯೋ ಭವತ್ಯಹಂಕಾರಃ ಇತ್ಯಮರಃ । ಅತಿಸಂಬಾಧಯೋಗಾತ್, ಅವಕಾಶರಹಿತಂ ಅತಿನಿಬಿಡಂ ಯಥಾ ಭವತಿ ತಥಾ ಸಂಬಂಧಾತ್, ಅಂತಃಪೂರ್ತೇಃ ಇವೇತಿ ಅತ್ರಾಪಿ ಸಂಬಧ್ಯತೇ, ಅಂತಃಪೂರಣಾದ್ ಹೇತೋರಿವ ದ್ರಢಿಷ್ಠಾವಪಿ ಅತಿಶಯೇನ ದೃಢೌ ಅಪಿ, ದೃಢತ್ವೇ ಸೌಂದರ್ಯಾದಿ-ಗುಣಾನಾಂ ನಿರವಕಾಶಸಂಬಂಧಸ್ಯ ಕಾರಣತ್ವೇನ ಸಂಭಾವನಾತ್ ಉತ್ಪ್ರೇಕ್ಷಾಲಂಕಾರಃ । ಸಂಭಾವನಮಥೋತ್ಪ್ರೇಕ್ಷಾ ಇತಿ ಲಕ್ಷಣಾತ್, ಪರಿಮೃದುಲೌ ಅತ್ಯಂತಂ ಮೃದೂ, ಲೋಕೇ ದೃಢತರೇ ಪಾಷಾಣಾದೌ ಮೃದುತ್ವಂ ನ ದೃಷ್ಟಂ । ಇಮೌ ದೃಢಾವಪಿ ಜ್ಞಾನಾ-ನಂದಾತ್ಮಕತ್ವಾತ್ ಮೃದೂ ಅಪಿ ಭವತಃ ಇತಿ ವಿರೋಧಾಭಾಸಾಲಂಕಾರಃ, ವಿರೋಧಃ ಸೋಽವಿರೋಧೇಽಪಿ ವಿರುದ್ಧತ್ವೇನ ಯದ್ವಚಃ ಇತಿಲಕ್ಷಣಾತ್ । ಪೀವರೌ ಪೀನೌ ದಾರಿತಾರೇಃ ವಿದಾರಿತಶತ್ರೋಃ ಶ್ರೀವಿಷ್ಣೋಃ ಊರೂ ಅಧೀಮೇದುರಂ ಧೀ ವಿರುದ್ಧಾ ಅಧೀಃ ಅಜ್ಞಾನಂ ತಯಾ ಮೇದುರಂ ಪುಷ್ಟಂ, ಅಜ್ಞಾನಮೇದುರತ್ವಂ ನಾಮ ಅಜ್ಞಾನ-ಸಹಕಾರೇಣ ಅತಿದುಷ್ಟಫಲಪ್ರದತ್ವಂ, ದುರಂತಂ ಅತಿಬಹುಳಂ ಮೇ ದುರಿತಂ ಅರಂ ಶೀಘ್ರಂ, ಲಘು ಕ್ಷಿಪ್ರಮರಂ ದ್ರುತಂ ಇತ್ಯಮರಃ, ದೂರೀಕ್ರಿಯಾಸ್ತಾಂ ದೂರೀ-ಕುರುತಾಂ, ಚ್ವಿಪ್ರತ್ಯಯಾಂತ ದೂರೀಶಬ್ದಪೂರ್ವಕಾತ್ ಕರೋತೇಃ ಆಶಿಷಿ ಲಿಙ್ ॥೧೫॥

**ಅನ್ವಯ–** ಸೌಂದರ್ಯಂ, ಸೌಕುಮಾರ್ಯಂ, ಅತಿಬಹುಲಂ ಬಲಂ, ತೇಜಃ, ಓಜಃ, ಪ್ರತಾಪಃ, ತಾರುಣ್ಯಂ ಚ, ಇತಿ ಅಮೀಷಾಂ ಅಹಮಹಮಿಕಯಾ ಇವ ಅತಿಸಂಬಾಧ-ಯೋಗಾತ್ ಅಂತಃಪೂರ್ತೇಃ ದ್ರಢಿಷ್ಠಾವಪಿ ಪರಿಮೃದುಲೌ, ಪೀವರೌ ದಾರಿತಾರೇಃ ಊರೂ ದುರಂತಂ ಅಧೀಮೇದುರಂ ಮೇ ದುರಿತಂ ಅರಂ ದೂರೀಕ್ರಿಯಾಸ್ತಾಂ.

**ಅನ್ವಯಾರ್ಥ–** **ಸೌಂದರ್ಯಂ** = ಸೌಂದರ್ಯವು, **ಸೌಕುಮಾರ್ಯಂ** = ಕೋಮಲತೆಯು, **ಅತಿಬಹುಲಂ** = ಬಹಳ ಹೆಚ್ಚಾದ, **ಬಲಂ** = ಶಕ್ತಿಯು, **ತೇಜಃ** = ಕಾಂತಿಯು, **ಓಜಃ** = ಜ್ಞಾನವು, **ಪ್ರತಾಪಃ** = ಪರಾಕ್ರಮವು, **ಇತಿ** = ಇವೇ ಮೊದಲಾದ, **ಅಮೀಷಾಂ** = ಈ ಗುಣಗಳ, **ಅಹಮಹಮಿಕಯಾ ಇವ** = ನಾನು ಮುಂದು ನಾನು ಮುಂದು ಎಂಬ ಭಾವದಿಂದಲೋ ಎಂಬಂತೆ, **ಅತಿಸಂಬಾಧಯೋಗಾತ್** = ಬಹಳ ಇಕ್ಕಟ್ಟಾಗಿ ಸಂಬಂಧವಿರುವುದರಿಂದ, **ಅಂತಃಪೂರ್ತೇಃ (ಇವ)** = ಒಳಗಡೆ ತುಂಬಿರುವುದರಿಂದಲೋ ಎಂಬಂತೆ, **ದ್ರಢಿಷ್ಠೌ ಅಪಿ** = ಬಹಳ ಗಟ್ಟಿಯಾಗಿದ್ದರೂ, **ಪರಿಮೃದುಲೌ** = ಅತ್ಯಂತ ಮೃದುವಾಗಿರುವ, **ಪೀವರೌ** = ಪುಷ್ಟವಾದ, **ದಾರಿತಾರೇಃ (ಹರೇಃ)** = ಶತ್ರುಸಂಹಾರಕನಾದ ಶ್ರೀಹರಿಯ, **ಊರೂ** = ಎರಡು ತೊಡೆಗಳು, **ದುರಂತಂ** = ಬಹಳ ದುಃಖಕರವಾದ, **ಅಧೀಮೇದುರಂ** = ಅಜ್ಞಾನದಿಂದ ಪರಿಪುಷ್ಟವಾದ, **ಮೇ ದುರಿತಂ** = ನನ್ನ ಪಾಪವನ್ನು, **ಅರಂ** = ಬೇಗನೆ, **ದೂರೀಕ್ರಿಯಾಸ್ತಾಂ** = ಪರಿಹರಿಸಲಿ.

**ತಾತ್ಪರ್ಯ–** ಸೌಂದರ್ಯ, ಸುಕುಮಾರತೆ, ಬಹಳಹೆಚ್ಚಾದ ಬಲ, ಕಾಂತಿ, ಜ್ಞಾನ, ಪರಾಕ್ರಮ, ತಾರುಣ್ಯ ಇವೇ ಮೊದಲಾದ ಅನಂತಾನಂತಗುಣಗಳು ನಾನು ಮುಂದೆ ನಾನು ಮುಂದೆ ಎಂದು ಪರಮಾತ್ಮನ ತೊಡೆಗಳೆರಡರಲ್ಲಿಯೂ ಪ್ರತಿಯೊಂದು ಗುಣವೂ ಪೂರ್ಣವಾಗಿ ಇಕ್ಕಟ್ಟಾಗಿ ಸೇರಿಕೊಂಡಿವೆ. ಇದರಿಂದಾಗಿ ಪರಮಾತ್ಮನ ತೊಡೆಗಳೆರಡೂ ಅತ್ಯಂತ ಗಟ್ಟಿಯಾಗಿವೆ. ಪದಾರ್ಥಗಳು(ಕಣಗಳು)ಬಹಳ ಒತ್ತಟ್ಟಿನಿಂದ ಸೇರಿದರೆ ವಸ್ತು ಗಟ್ಟಿಯಾಗುತ್ತದೆಯಷ್ಟೇ. ಹೀಗಿದ್ದರೂ ಕೂಡ ಜ್ಞಾನಆನಂದಸ್ವರೂಪಗಳಾದ ಶ್ರೀವಿಷ್ಣುವಿನ ಎರಡು ತೊಡೆಗಳೂ ಅತ್ಯಂತಮೃದುವಾಗಿವೆ. ಇದು ಪರಮಾತ್ಮನ ಅಚಿಂತ್ಯಾದ್ಭುತ ಶಕ್ತಿಯಿಂದಲೇ ಸಾಧ್ಯವಾದ ವಿಷಯವು. ಇಂತಹ ಎರಡು ತೊಡೆಗಳು ನನ್ನಲ್ಲಿರುವ ಬಹಳ ಕೆಟ್ಟದಾದ, ಅಜ್ಞಾನದಿಂದ ಪುಷ್ಟವಾದ ಪಾಪವನ್ನು ಬಹಳ ಬೇಗನೆ ಪರಿಹರಿಸಲಿ. (ಇಂತಹ ಪರಮಾತ್ಮನ ಎರಡು ತೊಡೆಗಳನ್ನು ಧ್ಯಾನಿಸಿ ಅಜ್ಞಾನ ಪರಿಹಾರ ಮಾಡಿಕೊಳ್ಳಬೇಕು).

**ಶುದ್ಧಿಂ ಬುದ್ಧೇರ್ವಿದಧ್ಯಾದ್ಗುರುಜನಕಜಗದ್ದೀಪದೀಪ್ತ್ಯಂತರೀಯ-**
**ಶ್ಲಿಷ್ಯತ್ಕೌಶೇಯಪೀತಾಂಶುಕವಲನಲಸತ್ಕಾಂಚನೋದ್ದಾಮಕಾಂಚೀ ।**

**ನಿಷ್ಟಪ್ತಸ್ನಿಗ್ಧಹೇಮಾಚಲಕಟಕತಟಾಸ್ಫಾಲನಾಸ್ಫಾರಪೂರ-**
**ತ್ವಂಗದ್ಬಾಲಾತಪಾಂತಪ್ರತಿಘಟಿತತಟಿತ್ಕೋಟಿಮಾಲೋಜ್ಜ್ವಲಾ ನಃ ॥೧೬॥**

**ವ್ಯಾಖ್ಯಾನ–** ಭಗವತ್ಕಟಿಸ್ಥಕಾಂಚೀಂ ಸ್ತೌತಿ – **ಶುದ್ಧಿಮಿತಿ ॥** ನಿಷ್ಟಪ್ತಂ ಸಂತಪ್ತಂ ಸಿಗ್ಧಂ ಚ ಯದ್ ಹೇಮ ಸುವರ್ಣಂ ತನ್ಮಯಃ ಅಚಲಃ ಮೇರುಪರ್ವತಃ ತಸ್ಯ ಕಟಕತಟೇ ನಿತಂಬಭೂಮೌ ಆಸ್ಫಾಲನಂ ಸಂಘರ್ಷಃ, ಉತ್ತರತ್ರ ಬಾಲಾತಪೇತಿವಿಶೇಷಣಾತ್ ಬಾಲಾತಪಸ್ಯ ಸಂಘರ್ಷ ಏವಾತ್ರ ಗ್ರಾಹ್ಯಃ ತೇನ ಜಾತಾಃ ಸ್ಫಾರಾಃ ಕನಕಬುದ್ಬುದಾಃ, ಸ್ಫಾರಃ ಸ್ಯಾತ್ ಪುಂಸಿ ವಿಕಟೇ ಕರಕಾದೇಶ್ಚ ಬುದ್ಬುದೇ ಇತಿ ಮೇದಿನ್ಯಭಿಧಾನಾತ್ ಸ್ಫಾರಶಬ್ದಃ ತೇಜಸ್ಸಂಯೋಗದ್ರವೀಭೂತದ್ರವ್ಯಬುದ್ಬುದವಾಚೀ, ತೇಷಾಂ ಪೂರಃ ಪ್ರವಾಹಃ, ತತ್ರ ತ್ವಂಗನ್ ಗಚ್ಛನ್, ಬಾಲಾತಪಃ, ಬಾಲಾತಪಸ್ಯ ಉಷ್ಣತ್ವೇನ ತತ್ಸಂಬಂಧೇನ ಸುವರ್ಣಮಯಮೇರುಪರ್ವತಸ್ಥಸುವರ್ಣಸ್ಯ ದ್ರವೀಭಾವೇನ ಬುದ್ಬುದಾಃ ಭವಂತಿ । ತೈಶ್ಚ ಬುದ್ಬುದೈಃ ಪ್ರವಾಹೋ ಭವತಿ ಇತ್ಯರ್ಥಃ । ಬಾಲಾತಪಸಂಬಂಧೇನಾಪಿ ದ್ರವೀ-ಭಾವಾತ್ ಮೇರುಸುವರ್ಣಸ್ಯ ಅತಿಶುದ್ಧತ್ವಂ ಸೂಚಿತಂ । ಸ್ವತೋ ದೀಪ್ತಿಯುತಸ್ಯ ಆತಪಸ್ಯ ತಾದೃಶಸುವರ್ಣಪ್ರವಾಹಸಂಬಂಧೇನ ಅತಿದೀಪ್ತಿಶ್ಚ ಸೂಚಿತಾ । ತಾದೃಶ ಬಾಲಾತಪಸ್ಯ ಅಂತೇನ ಪ್ರಾಂತೇನ ಪ್ರತಿಘಟಿತಾ ಯಾ ತಟಿತ್ಕೋಟೀನಾಂ ಮಾಲಾ ತದ್ವದುಜ್ಜ್ವಲಾ । ಅಥವಾ ಅಗ್ನಿನಾ ನಿಷ್ಟಪ್ತಃ ಯಃ ಹೇಮಾಚಲಕಟಕತಟಃ ಮೇರುಪರ್ವತನಿತಂಬ-ಪ್ರದೇಶಃ, ತತ್ರ ಆಸ್ಫಾಲನಂ ಸಂಬಂಧಃ ಯಸ್ಯ ಸಃ, ಸ್ಫಾರಃ ಬಹಲಃ ಪೂರಃ ಪ್ರವಾಹಃ, ಪೂರ್ವಪ್ರಕೃತತ್ವಾತ್ ಸುವರ್ಣಸ್ಯೇತಿ ಲಭ್ಯತೇ । ಏವಂಚ ಪೂರಃ ಸುವರ್ಣಪ್ರವಾಹಃ ತತ್ರ ತ್ವಂಗಂತೀ ಚ ಸಾ ಬಾಲಾತಪಾಂತಪ್ರತಿಘಟಿತಾ ಚ ಸಾ ತಟಿತ್ಕೋಟಿಮಾಲಾ ಚ ತದ್ವದುಜ್ಜ್ವಲೇತ್ಯರ್ಥಃ । ಅನೇನ ಯದಿ ಹೇಮಾಚಲಕಟಕತಟಃ ಅಗ್ನಿನಾ ನಿಷ್ಟಪ್ತಃ ಸ್ಯಾತ್ ತರ್ಹಿ ತತ್ರ ಸ್ವರ್ಣಪ್ರವಾಹೇ ಸತಿ ತತ್ಸಂಬದ್ಧಾ ಬಾಲಾತಪಸಂಬದ್ಧಾ ಚ ಯಾ ತಟಿತ್ಕೋಟಿಮಾಲಾ ತಯಾ ಉಪಮೇಯಾ ಸ್ಯಾತ್ ಭಗವತ್ಕಾಂಚೀತಿ ಅಭೂತೋ-ಪಮಾ ಇತ್ಯುಕ್ತಂ ಭವತಿ । ಗುರುಜನಕಸ್ಯ ಬ್ರಹ್ಮಾದಿಜನಕಸ್ಯ ಶ್ರೀವಿಷ್ಣೋಃ ಜಗದ್ದೀಪಸ್ಯ ಲೋಕದೀಪಸ್ಯ ಸೂರ್ಯಸ್ಯ ದೀಪ್ತಿರಿವ ದೀಪ್ತಿಃ ಯಸ್ಯ ತತ್ ಜಗದ್ದೀಪದೀಪ್ತಿ, ತಚ್ಚ ತತ್ ಅಂತರೀಯಂ ಚ ಅಧೋಽಂಶುಕಂ ಚ ಅಂತರೀಯೋಪಸಂವ್ಯಾನಪರಿಧಾನಾನ್ಯಾ-ಧೋಽಂಶುಕೇ ಇತ್ಯಮರಃ । ತತ್ರ ಶ್ಲಿಷ್ಯತ್ ಸಂಬದ್ಧಂ ಕೌಶೇಯಂ ಕ್ರಿಮಿಕೋಶೋತ್ಥಂ

ಪೀತಂ ಯದ್ ಅಂಶುಕಂ ಉತ್ತರೀಯವಸ್ತ್ರಂ, ಉತ್ತರೀಯೇ ವಸ್ತ್ರಮಾತ್ರೇ ಸೂಕ್ಷ್ಮವಸ್ತ್ರೇऽಪಿ ಚಾಂಶುಕಂ ಇತಿರತ್ನಮಾಲಾ, ತಸ್ಯ ವಲನೇನ ಸ್ವೋಪರಿ ಸಂಚಲನೇನ ವಲಸಂಚಲನೇ ಇತ್ಯಸ್ಮಾತ್ ಲ್ಯುಟ್, ಲಸಂತೀ ಕಾಂಚನೀ ಸುವರ್ಣಮಯೀ ಉದ್ದಾಮ-ಕಾಂಚೀ ಉತ್ಕೃಷ್ಟಮೇಖಲಾ ಅಸ್ಮಾಕಂ ಬುದ್ಧೇಃ ಶುದ್ಧಿಂ ವಿದಧ್ಯಾತ್, ಕುರ್ಯಾತ್ ವಿ-ಪೂರ್ವಾತ್ ಡುಧಾಞ್‌ಧಾರಣಪೋಷಣಯೋಃ ಇತ್ಯಸ್ಮಾತ್ ಕರ್ತರಿ ಪ್ರಾರ್ಥನಾಯಾಂ ಲಿಙ್ । ಅತ್ರ ಅಂತರೀಯಸ್ಯ ನಿಷ್ಟಪ್ತಸ್ನಿಗ್ಧಹೇಮಾಚಲಕಟಕತಟಾಸ್ಫಾಲನಸ್ಫಾರಪೂರೇಣ ಸಾಮ್ಯಂ । ಉತ್ತರೀಯವಸ್ತ್ರಸ್ಯ ಬಾಲಾತಪೇನ ಸಾಮ್ಯಂ । ಕಾಂಚ್ಯಾಃ ತಟಿತ್‌ಕೋಟಿ-ಮಾಲಯಾ ಸಾಮ್ಯಂ ಇತಿ ದ್ರಷ್ಟವ್ಯಂ. ॥೧೯॥

**ಅನ್ವಯ–** ನಿಷ್ಟಪ್ತಸ್ನಿಗ್ಧಹೇಮಾಚಲಕಟಿಕತಟಾಸ್ಫಾಲನಸ್ಫಾರಪೂರತ್ವಂಗದ್ಬಾಲಾ-ತಪಾಂತಪ್ರತಿಘಟಿತತಟಿತ್ಕೋಟಿಮಾಲೋಜ್ಜ್ವಲಾ, ಗುರುಜನಕಜಗದ್ದೀಪದೀಪ್ತ್ಯಂತ-ರೀಯಶ್ಲಿಷ್ಯತ್‌ಕೌಶೇಯಪೀತಾಂಶುಕವಲನಲಸತ್‌ಕಾಂಚನೋದ್ದಾಮ ಕಾಂಚೀ ನಃ ಬುದ್ಧೇಃ ಶುದ್ಧಿಂ ವಿದಧ್ಯಾತ್ ॥

**ಅನ್ವಯಾರ್ಥ–** ನಿಷ್ಟಪ್ತ = ಪುಟಕ್ಕೆ ಹಾಕಿದ (ಶುದ್ಧವಾದ), ಸ್ನಿಗ್ಧ = ಮೃದುವಾದ, **ಹೇಮ** = ಸುವರ್ಣಮಯವಾದ, **ಅಚಲ** = ಮೇರುಪರ್ವತದ, **ಕಟಿಕತಟ** = ನಿತಂಬ-ಪ್ರದೇಶದಲ್ಲಿ , **ಆಸ್ಫಾಲನ** = (ಎಳೆಯಬಿಸಿಲಿನ) ಬಲವಾದ ಸಂಘರ್ಷದಿಂದ ಉಂಟಾದ, (ಹೊಡೆತದಿಂದ) , **ಸ್ಫಾರ** = ಬಂಗಾರದಗುಳ್ಳೆಗಳ , **ಪೂರ** = ಪ್ರವಾಹದಲ್ಲಿ , **ತ್ವಂಗತ್** = ಓಡಾಡುವ, **ಬಾಲಾತಪ** = ಎಳೆಯಬಿಸಿಲಿನ, **ಅಂತ** = ತುದಿಯ ಭಾಗದಿಂದ, **ಪ್ರತಿ-ಘಟಿತ** = ಸಂಬಂಧಹೊಂದಿದ, **ತಟಿತ್ಕೋಟಿ** = ಕೋಟಿಕೋಟಿಸಂಖ್ಯೆಯ ಮಿಂಚುಗಳ, **ಮಾಲಾ** = ಸಾಲಿನಂತೆ, **ಉಜ್ಜ್ವಲಾ** = ಪ್ರಕಾಶಮಾನವಾದ (ಅಥವಾ ನಿಷ್ಟಪ್ತ = ಬೆಂಕಿಯ ಬಿಸಿತಗಲಿಕರಗಿದ, **ಸ್ನಿಗ್ಧಹೇಮಾಚಲಕಟಿಕತಟ** = ನುಣುಪಾದ ಬಂಗಾರದಿಂದಲೇ ರಚಿತವಾದ ಮೇರುಪರ್ವತದ ನಿತಂಬಪ್ರದೇಶದ, **ಆಸ್ಫಾಲನ** = ಸಂಬಂಧವುಳ್ಳ, **ಸ್ಫಾರ-ಪೂರ** = ಬಹಳವಾದ ಸುವರ್ಣದ ಪ್ರವಾಹದಲ್ಲಿ, **ತ್ವಂಗದ್** = ಚಲಿಸುತ್ತಿರುವ, **ಬಾಲಾತಪಾಂತಪ್ರತಿಘಟಿತ** = ಎಳೆಬಿಸಿಲಿನ ಅಂಚಿನಿಂದ ಘರ್ಷಣೆಹೊಂದಿದ, **ತಟಿತ್ಕೋಟಿಮಾಲೋಜ್ಜ್ವಲಾ** = ಕೋಟಿಕೋಟಿಸಂಖ್ಯೆಯ ಮಿಂಚಿನಂತೆ ಪ್ರಕಾಶಮಾನ-

ವಾದ), **ಗುರುಜನಕ** = ಜಗದ್ಗುರುಗಳಾದ ಬ್ರಹ್ಮಾದಿಗಳಿಗೆ ತಂದೆಯಾದ ಶ್ರೀವಿಷ್ಣುವಿನ, **ಜಗದ್ದೀಪದೀಪ್ತಿ** = ಲೋಕಕ್ಕೆ ದೀಪದಂತಿರುವ ಸೂರ್ಯನ ಪ್ರಕಾಶದಂತೆ ಪ್ರಕಾಶವುಳ್ಳ, **ಅಂತರೀಯ** = ಉಡುವ ಪೀತಾಂಬರಕ್ಕೆ, **ಶ್ಲಿಷ್ಯತ್** = ಹೊಂದಿಕೆಯಾಗುವ (ಸಂಬಂಧ-ಹೊಂದಿರುವ), **ಕೌಶೇಯ** = ರೇಶ್ಮೆಯ, **ಪೀತಾಂಶುಕ** = ಹಳದಿಬಣ್ಣದ ಉತ್ತರೀಯದ, **ವಲನ** = ಇತ್ತ ಅತ್ತ ಚಲನದಿಂದ, **ಲಸತ್** = ಶೋಭಿಸುತ್ತಿರುವ, **ಕಾಂಚನ** = ಭಂಗಾರದ, **ಉದ್ದಾಮಕಾಂಚೀ** = ಉತ್ಕೃಷ್ಟವಾದ ನಡುಪಟ್ಟಿಯು (ಒಡ್ಯಾಣವು), **ನಃ** = ನಮ್ಮ, **ಬುದ್ಧೇಃ** = ಅಂತಃಕರಣಕ್ಕೆ, **ಶುದ್ಧಿಂ** = ಪವಿತ್ರತೆಯನ್ನು, **ವಿದಧ್ಯಾತ್** = ಉಂಟುಮಾಡಲಿ.

**ತಾತ್ಪರ್ಯ–** ಈ ಪದ್ಯದಿಂದ ಶ್ರೀಹರಿಯ ಸೊಂಟದಲ್ಲಿ ಪೀತಾಂಬರದ ಮೇಲೆ ವಿರಾಜಮಾನವಾದ ನಡುಪಟ್ಟಿಯನ್ನು ವರ್ಣಿಸುತ್ತಾರೆ-

ಬ್ರಹ್ಮಾದಿಗಳು ಜಗದ್ಗುರುಗಳು. ಅವರಿಗೂ ತಂದೆಯು ಶ್ರೀಹರಿಯು. ಅವನು ಲೋಕದೀಪನಾದ ಸೂರ್ಯನಂತೆ ಪ್ರಕಾಶವುಳ್ಳ ಒಂದು ಪೀತಾಂಬರವನ್ನುಟ್ಟಿದ್ದಾನೆ. ಅದಕ್ಕೆ ಹೊಂದಾಣಿಕೆಯಾಗುವ ರೇಶ್ಮೆಯ ಮತ್ತೊಂದು ಸ್ವಲ್ಪ ಕೆಂಪಾದ ಪೀತಾಂಬರವನ್ನು ಉತ್ತರೀಯವಾಗಿ ಹೊದ್ದಿದ್ದಾನೆ. ಇವೆರಡರ ಮಧ್ಯದಲ್ಲಿ ಉಟ್ಟಿರುವ ಪೀತಾಂಬರದ ಮೇಲೆ ಸೊಂಟದಲ್ಲಿ ಸುವರ್ಣಮಯವಾದ ಉತ್ಕೃಷ್ಟವಾದ ಒಡ್ಯಾಣವು ವಿರಾಜಿಸುತ್ತಿದೆ. ಈ ಸನ್ನಿವೇಶಕ್ಕೆ ಸರಿಯಾದ ಹೋಲಿಕೆಯನ್ನು ಹೀಗೆ ಕೊಡಬಹುದೆಂದು ಸ್ತೋತ್ರಕಾರರು ಹೇಳುತ್ತಿದ್ದಾರೆ.

ಮೇರುಪರ್ವತವು ಮೃದುಸುವರ್ಣಮಯವಾದುದು. ಆ ಚಿನ್ನವು ಸೂರ್ಯನ ಎಳೆಬಿಸಿಲಿಗೆ ಕರಗಿ ಸುವರ್ಣದ ಬಿಂದುವಿನ ಆಕಾರದ ಗುಳ್ಳೆಗಳಿಂದ ಕೂಡಿದ ಪ್ರವಾಹವು ಮೇರುಪರ್ವತದ ಮಧ್ಯಪ್ರದೇಶದಲ್ಲಿ ಹರಿಯುತ್ತದೆ. ಆಗ ಎಳೆಯ ಸೂರ್ಯನ ಬಿಸಿಲೂ ಅಲ್ಲಿರುತ್ತದೆ. ಸೂರ್ಯನ ಎಳೆಬಿಸಿಲು ಕೋಲು ಕೋಲಾಗಿ ಚಲಿಸುತ್ತಾ ನೂರಾರು ಕೋಟಿ ಕೋಟಿ ಮಿಂಚುಗಳನ್ನು ಉಂಟುಮಾಡುತ್ತಾ ಚಿನ್ನದ ಪ್ರವಾಹದ ಮೇಲೆ ಹರಿಯುತ್ತದೆ. ಆಗ ಯಾವ ರೀತಿಯ ಪ್ರಕಾಶವುಂಟಾಗುತ್ತದೆಯೋ ಅಂತಹ ಪ್ರಕಾಶದಿಂದ ಕೂಡಿದ ಶ್ರೀಹರಿಯ ಕಾಂಚಿಯು ನಮ್ಮ ಅಂತಃಕರಣದಲ್ಲಿ ಪ್ರಕಾಶವನ್ನು ಬೀರಿ ಶುದ್ಧಿಯನ್ನುಂಟು

ಮಾಡಲಿ. ಬೆಂಕಿಯಿಂದ ಕರಗಿದ ಮೇರುಪರ್ವತ ಚಿನ್ನದ ಪ್ರವಾಹವು ಸೂರ್ಯನ ಎಳೆಬಿಸಿಲಿನ ಸಂಬಂಧವುಂಟಾದಾಗ ನೂರಾರು ಕೋಟಿ ಮಿಂಚುಗಳ ಪ್ರಕಾಶವನ್ನುಂಟು-ಮಾಡುವಂತೆ ಮೇಲಿನ ಹೊದ್ದಿಕೆಯ ಚಲನವಲನದಿಂದ ಅತ್ಯದ್ಭುತಪ್ರಕಾಶಬೀರುತ್ತಿರುವ ಕಾಂಚಿಯು ನಮ್ಮ ಮನಸ್ಸಿಗೆ ಶುದ್ಧಿಯನ್ನುಂಟು ಮಾಡಲಿ ಎಂಬ ಅಭಿಪ್ರಾಯವೂ ಇಲ್ಲಿ ಕಂಡುಬರುತ್ತಿದೆ. ಸುವರ್ಣಾಚಲದ ಮಧ್ಯಭಾಗವು ಎಳೆಬಿಸಿಲಿನಿಂದ, ಅಥವಾ ಬೆಂಕಿಯಿಂದ ಕರಗಿದರೆ ಅಲ್ಲಿ ಗುಳ್ಳೆ ಗುಳ್ಳೆಯಾಗಿರುವ ಚಿನ್ನದ ರಸದ ಪ್ರವಾಹವು ಕೆಳಗೆ ಮತ್ತು ಅಡ್ಡಲಾಗಿ ಹರಿಯುತ್ತಾ ಹೋದರೆ ಅಲ್ಲಿ ಕೆಂಪುಹಳದಿಯಾದ ಎಳೆಯಬಿಸಿಲು ಕೋಲುಕೋಲಾಗಿ ಪ್ರವೇಶಿಸಿದರೆ, ಆಗ ಉಂಟಾಗುವ ಕೋಟಿಕೋಟಿ ಮಿಂಚಿನ ಪ್ರಕಾಶವು ಶ್ರೀಹರಿಯ ನಡುವಿನ ಒಡ್ಯಾಣದಲ್ಲಿ ಇದೆಯೆಂದು ಊಹಿಸಬಹುದು ಎಂಬ ಅಭೂತೋಪಮೆಯನ್ನು ಇಲ್ಲಿ ಹೇಳಿದ್ದಾರೆ. ಶ್ರೀಹರಿಯು ಉಟ್ಟ ಪೀತಾಂಬರಕ್ಕೆ ಚಿನ್ನದ ಪ್ರವಾಹದ ಸಾಮ್ಯ, ಉತ್ತರೀಯಕ್ಕೆ ಹಳದಿಕೆಂಪಾದ ಎಳೆಯಬಿಸಿಲಿನ ಸಾಮ್ಯ, ಕಾಂಚಿಗೆ ಕೋಟಿಕೋಟಿ ಮಿಂಚುಗಳ ಸಾಮ್ಯ ಇವನ್ನು ಕೊಟ್ಟಿದ್ದಾರೆಂದು ತಿಳಿಯಬಹುದು. ಮೇಲಿನ ಉತ್ತರೀಯವು ಕೆಳಗಿನ ಪೀತಾಂಬರದ ಮೇಲೆ ಇತ್ತ ಅತ್ತ ಸರಿದಾಡುತ್ತಿರುವಾಗ ಮಧ್ಯದಲ್ಲಿರುವ ಚಿಕ್ಕ ಗೆಜ್ಜೆಗಳಿಂದ ಕೂಡಿದ ಕಾಂಚಿಯಲ್ಲಿ ಅದ್ಭುತ ಪ್ರಕಾಶವುಂಟಾಗುತ್ತದೆ. ಅದರ ಧ್ಯಾನದಿಂದ ಬುದ್ಧಿ ಶುದ್ಧಿಯುಂಟಾಗುತ್ತದೆ ಎಂದು ಪರಮತಾತ್ಪರ್ಯ.

**ನಿಮ್ನೋ ನಾಭಿಃ ಸುವೃತ್ತಸ್ತನುರಿತಿ ಗಣನಾ ಕಾ ಗುಣಾನಾಮಣೂನಾಂ**
**ವಿಷ್ಣೋರ್ವಿಶ್ವೈಕನೀಡಂ ನಲಿನಮಿದಮುದ್ಧೈದುದ್ವಮದ್ರೋಚಿರೋಘಮ್ ।**
**ಯಸ್ಮಾದ್ಯಸ್ಮಿನ್ನಲೀ ಕಃ ಶ್ರುತಿಭಿರಭಿನದನ್ ಬ್ರಹ್ಮ ನಾರಾಯಣಾಖ್ಯಂ**
**ನಿತ್ಯಾನಂದೋರುಸಂವಿತ್ಸದವಯವಮದೋ ವೇದ್ಯತೇ ಯತ್ರ ಮಿತ್ರಮ್ ॥೧೭**

**ವ್ಯಾಖ್ಯಾನ–** ನಾಭಿಂ ಸ್ತೌತಿ ॥ ಯತ್ರ ಯಾಸು ಶ್ರುತಿಷು ನಿತ್ಯಾನಂದೋರುಸಂವಿತ್-ಸದವಯವಂ, ನಿತ್ಯಾನಂದಶ್ಚ ಉರುಸಂವಿಚ್ಚ ತೇ ಏವ ಸದವಯವಾಃ ನಿರ್ದೋಷಾ-ವಯವಾಃ ಯಸ್ಯ ತತ್, ಬ್ರಹ್ಮ ಪೂರ್ಣಂ ನಾರಾಯಣಾಖ್ಯಂ ಅದಃ ಸ್ತುತ್ಯತ್ವೇನ ಪ್ರಕೃತಂ ಮಿತ್ರಂ ಮೋಕ್ಷಯೋಗ್ಯಾನಾಂ ನಿರ್ದುಃಖಸುಖಪ್ರದತ್ವೇನಮಿತ್ರಂ (ಸುಹೃದ್ರೂಪಂ) ವೇದ್ಯತೇ ಜ್ಞಾಪ್ಯತೇ, ವಿದ ಜ್ಞಾನೇ ಇತ್ಯಸ್ಮಾತ್ ಯಗಂತಾತ್ ಕರ್ಮಣಿ ಲಟ್ । ತಾಭಿಃ

ವ್ಯಕ್ತವಾಗುತ್ತದೆ. ಹೀಗಿದ್ದರೂ ಆ ನಾಭಿಯು ಬಹಳ ಆಳವಾಗಿ, ಸುಂದರವಾಗಿ ಗುಂಡಗೆ, ಮತ್ತು ಚಿಕ್ಕದಾಗಿ ಇದೆ- ಇತ್ಯಾದಿಯಾದ ಇತರ ಲೌಕಿಕಪುರುಷರಿಗೂ ಇರಬಹುದಾದ ಗುಣಗಳನ್ನು ವರ್ಣಿಸುವುದರಿಂದ ಏನು ಪ್ರಯೋಜನ? ಈ ಅತ್ಯಲ್ಪಗುಣಗಳ ವರ್ಣನೆಯಿಂದ ಪರಮಾತ್ಮನ ನಾಭಿಗೆ ಅತಿಶಯವಾದ ಮಾಹಾತ್ಮ್ಯವು ತಿಳಿದು-ಬರಲಾರದು. ಸರ್ವಜೀವೋತ್ತಮರಾದ ಬ್ರಹ್ಮದೇವರಿಗೆ ಆಶ್ರಯವಾದ, ಬ್ರಹ್ಮಾಂಡಕ್ಕೆ ಆಧಾರವಾದ, ಅಲೌಕಿಕಮಹಿಮೆಯಿಂದ ಕೂಡಿದ ಶ್ರೀಹರಿಯನಾಭಿಗೆ, ಲೌಕಿಕಪುರುಷರ ನಾಭಿಯಂತೆ, ಆಳವಾಗಿದೆ. ಗುಂಡಗಿದೆ ಇತ್ಯಾದಿಗುಣವರ್ಣನವು ಹೆಚ್ಚಾದ ಮಹತ್ತ್ವವನ್ನು ತಿಳಿಸಿಕೊಡುವುದಿಲ್ಲ. ಹಿಂದೆ ಹೇಳಿದ ಗುಣವೇ ಅದರ ಮಹಾಮಹತ್ತ್ವಕ್ಕೆ ಸಾಕ್ಷಿಯಾಗಿದೆ.

**ಮುಕ್ತಾಗ್ರಣ್ಯಾವಲೀನಾಮಭಿಮತವಸತಿಸ್ತಾಸುಚಾನುಪ್ರವಿಷ್ಟಂ**
**ಸ್ವೈರಂ ಬಂಧೇನ ಬದ್ಧಂ ವಿಮಲಸುಖಚಿತಾ ಸ್ವೇನ ಚಾಪಿ ಸ್ವತಂತ್ರಮ್ ।**
**ನಿರ್ದೋಷಂ ದೋಷಪುಂಜಪ್ರಸವಿಗುಣಜುಷಾಂ ನಿರ್ಗುಣಂ ಸದ್ಗುಣಾಢ್ಯಂ**
**ಸರ್ಗೇಽಪಿ ಗ್ರಸ್ತವಿಶ್ವಂ ತನು ಮಹದುದರಂ ಪಾತು ನಶ್ಚಿತ್ರಮಿತ್ಥಮ್ ॥೧೮॥**

**ವ್ಯಾಖ್ಯಾನ–** ಉದರಂ ಸ್ತೌತಿ- **ಮುಕ್ತಾಗ್ರಣ್ಯೇತಿ ॥** ಮುಕ್ತಾಗ್ರಣ್ಯಃ ಮುಕ್ತಾಫಲಶ್ರೇಷ್ಠಾಃ ತಾಸಾಂ ಆವಲಯಃ ಪಂಕ್ತಯಃ ತಾಸಾಂ ಅಭಿಮತವಸತಿಃ ಅಭಿಮತಾವಾಸಸ್ಥಾನಂ ತಾಸು ಮುಕ್ತಪ್ರಧಾನಾವಲೀಷು ಅನುಪ್ರವಿಷ್ಟಂ ಚ, ಅತ್ರ ಪ್ರಥಮಾರ್ಥಮಾದಾಯ ವಿರೋಧಃ । ಲೋಕೇ ಮುಕ್ತಾಫಲಾಗ್ರಣ್ಯಾವಲೀನಾಂ ಆಶ್ರಯಭೂತಂ ಮುಕ್ತಾಫಲಾ-ಗ್ರಣ್ಯಾವಲೀಷು ಅನುಪ್ರವಿಷ್ಟಂ ನಭವತಿ, ಇದಂ ಚ ಮುಕ್ತಾಫಲಾಗ್ರಣ್ಯಾವಲೀನಾಂ ಆಶ್ರಯಭೂತಂ ಅಪಿಚ ಮುಕ್ತಾಗ್ರಣ್ಯಾವಲೀಷು ಅನುಪ್ರವಿಷ್ಟಂ ಇತಿ ವಿರೋಧಪ್ರತೀತೇಃ। ಸಂಸಾರಬಂಧಧ್ವಂಸೋಪೇತಲಕ್ಷಣಮುಕ್ತರೂಪದ್ವಿತೀಯಮರ್ಥಮಾದಾಯ ವಿರೋಧಪರಿಹಾರಃ । ಭಗವದುದರಂ ಬಂಧಧ್ವಂಸೋಪೇತರೂಪಮುಕ್ತಾಶ್ರಯಭೂತ-ಮಪಿ ನಿಯಾಮಕತ್ವೇನ ಮುಕ್ತೇಷ್ವಪಿ ಸ್ವಯಂ ವರ್ತತ ಇತ್ಯವಿರೋಧಾತ್ । ವಿಮಲ-ಸುಖಚಿತಾ ನಿರ್ಮಲಾನಂದಜ್ಞಾನಾತ್ಮಕೇನ ಸ್ವೇನ ಸ್ವರೂಪಭೂತೇನ ಉದರಬಂಧನ-ವಸ್ತ್ರರೂಪೇಣ ಅಲಂಕಾರೇಣ ಬದ್ಧಮಪಿ ಸ್ವತಂತ್ರಂ ಚ, ಅತ್ರ ಆಪಾತತಃ ಪ್ರತೀಯ-ಮಾನಪ್ರಕೃತಿಬದ್ಧತ್ವಾರ್ಥಮಾದಾಯ ವಿರೋಧಃ, ಪ್ರಕೃತಿಬದ್ಧೇ ಸ್ವಾತಂತ್ರ್ಯಾದರ್ಶನಾತ್, ಅಲಂಕಾರಯುಕ್ತಾರ್ಥತ್ವಮಾದಾಯ ವಿರೋಧಪರಿಹಾರಃ । ನಿರ್ದೋಷಂ ದೋಷ-

ರಹಿತಮಪಿ, ಗುಣಜುಷಾಂ ಗುಣಾನ್ ಸತ್ತ್ವಾದೀನ್ ಜುಷಂತೇ ಸೇವಂತೇ ಇತಿ ಗುಣ-ಜುಷಃ, ಕ್ವಿಪ್ ಚ (೩-೨-೭೬) ಅಯಮಪಿದೃಶ್ಯತೇ, ಸತ್ಸೂದ್ವಿಷೇತಿತ್ವಸ್ಯೈವಪ್ರಪಂಚಃ) ಉಖಾಸ್ರತ್ ಇತಿಸೂತ್ರೇ ಅನ್ಯೇಭ್ಯೋಽಪಿದೃಶ್ಯಂತೇ (೩-೨-೭೫) ಇತ್ಯನುವೃತ್ತೇಃ ಜುಷೀ ಪ್ರೀತಿಸೇವನಯೋಃ ಇತ್ಯಸ್ಮಾತ್ ಕ್ವಿಪ್, ಗುಣಜುಷಃ ಸಂಸಾರಿಣಃ, ತೇಷಾಂ, ದೋಷಪುಂಜಪ್ರಸವಿ, ದೋಷಪುಂಜಸ್ಯ ದೋಷಸಮುದಾಯಸ್ಯ ಪ್ರಸವಃ ಅಸ್ಯೇತಿ ತತ್, ದೋಷಸಮುದಾಯಪ್ರದಮಿತಿ ಯಾವತ್ ಗುಣಜುಷಾಮಿತ್ಯತ್ರ ಜ್ಞಾನಾದಿಗುಣ-ರೂಪಾರ್ಥಮಾದಾಯ ವಿರೋಧಃ । ನಿರ್ದೋಷಸ್ಯ ಜ್ಞಾನಾದಿಗುಣಯುಕ್ತೇಭ್ಯಃ ದೋಷಪ್ರದತ್ವಾದರ್ಶನಾತ್ । ಸತ್ತ್ವಾದಿಗುಣರೂಪಾರ್ಥಮಾದಾಯ ವಿರೋಧಪರಿ-ಹಾರಃ । ಸದ್ಗುಣಾಢ್ಯಂ, ಸದ್ಭಿಃ ನಿರ್ದುಷ್ಟಜ್ಞಾನಾನಂದಾದಿಗುಣೈಃ ಆಢ್ಯಂ ಶ್ರೇಷ್ಠಮಪಿ ನಿರ್ಗುಣಂ ಸತ್ತ್ವಾದಿಗುಣರಹಿತಮ್ । ನಿರ್ಗುಣಮಿತ್ಯತ್ರ ಜ್ಞಾನಾನಂದಾದಿಗುಣಾ-ನಾದಾಯ ವಿರೋಧಃ । ಜ್ಞಾನಾನಂದಾದಿಗುಣಯುಕ್ತೇ ಜ್ಞಾನಾನಂದಾದಿರಾಹಿತ್ಯಾ-ದರ್ಶನಾತ್ । ಸತ್ತ್ವಾದಿಗುಣಾನಾದಾಯ ವಿರೋಧಪರಿಹಾರಃ । ಸರ್ಗೇಽಪಿ ಸೃಷ್ಟಿ-ಕಾಲೇಽಪಿ ನ ಕೇವಲಂ ಪ್ರಲಯಕಾಲೇ ಇತ್ಯರ್ಥಃ । ಗ್ರಸ್ತವಿಶ್ವಂ, ಗ್ರಸ್ತಂ ಅಂತಃಪ್ರವೇ-ಶಿತಂ ವಿಶ್ವಂ ಜಗತ್ ಯೇನ ತತ್ । ವ್ಯಾಪ್ತರೂಪಸ್ಯ ಹರೇರುದರೇ ಸೃಷ್ಟಿಕಾಲೇಽಪಿ ಜಗದ್ ವರ್ತತೇ ಇತ್ಯರ್ಥಃ । ಅತ ಏವ ಮಹತ್ ಮಹಾಪರಿಮಾಣೋಪೇತಮಪಿ ತನು ಕೃಶಂ । ಅತ್ರಮಹತ್ತ್ವಾಣುತ್ವಯೋಃ ಯುಗಪತ್ ಏಕಸ್ಮಿನ್ ಅದರ್ಶನಾತ್ ಇತಿ ವಿರೋಧಃ । ಪ್ರಲಯಕಾಲ ಏವ ಗ್ರಸ್ತವಿಶ್ವತ್ವೇನ ಭಗವದುದರಂ ಮಹತ್, ಸೃಷ್ಟಿಕಾಲೇ ಗ್ರಸ್ತವಿಶ್ವತ್ವಾ-ಭಾವೇನ ಕೃಶಮಿತಿ ಕಾಲಭೇದೇನಾಪಿ ವಿರೋಧಃ ಪರಿಹರ್ತುಂ ನ ಶಕ್ಯತೇ, ಇತಿಸೂಚನಾಯ ಸರ್ಗೇಽಪಿ ಗ್ರಸ್ತವಿಶ್ವಮಿತ್ಯುಕ್ತಮ್। ಈಶ್ವರಾಚಿಂತ್ಯಶಕ್ತ್ಯಾ ಮಹತ್ತ್ವಾ-ಣುತ್ವಯೋಃ ಯುಗಪದೇಕಸ್ಮಿನ್ ಸಂಭವಾತ್ ವಿರೋಧಪರಿಹಾರಃ । ಇತ್ಥಂ ಚಿತ್ರಂ ವಿಚಿತ್ರಶಕ್ತ್ಯುಪೇತಮ್ । ಪೂರ್ವಶ್ಲೋಕಾತ್ ವಿಷ್ಣೋರಿತಿ ವರ್ತತೇ, ವಿಷ್ಣೋರುದರಂ ನಃ ಅಸ್ಮಾನ್ ಪಾತು ರಕ್ಷತು । ಪಾರಕ್ಷಣೇ ಇತ್ಯಸ್ಮಾತ್ ಕರ್ತರಿಲೋಟ್ । ಅತ್ರ ವಿರೋಧಾ-ಭಾಸಾಲಂಕಾರಃ । ವಿರೋಧಃ ಸೋಽವಿರೋಧೇಽಪಿ ವಿರುದ್ಧತ್ವೇನ ಯದ್ವಚಃ ಇತಿಲಕ್ಷಣಾತ್ ॥೧೮॥

**ಅನ್ವಯ–** ಮುಕ್ತಾಗ್ರಣ್ಯಾವಲೀನಾಂ ಅಭಿಮತವಸತಿಃ ತಾಸು ಅನುಪ್ರವಿಷ್ಟಂ ಚ,

ವಿಮಲಸುಖಚಿತಾ ಸ್ವೇನ ಬಂಧೇನ ಸ್ವೈರಂ ಬದ್ಧಮಪಿ ಸ್ವತಂತ್ರಂ ಚ, ನಿರ್ದೋಷಂ ಗುಣಜುಷಾಂ ದೋಷಪುಂಜಪ್ರಸವಿ, ಸದ್ಗುಣಾಢ್ಯಂ ನಿರ್ಗುಣಂ ಸರ್ಗೇಪಿ ಗ್ರಸ್ತವಿಶ್ವಂ, ಮಹತ್ ತನು, ಇತ್ಥಂ ಚಿತ್ರಂ (ವಿಷ್ಣೋಃ) ಉದರಂ ನಃ ಪಾತು ।

**ಅನ್ವಯಾರ್ಥ–** ಮುಕ್ತಾಗ್ರಣ್ಯಾವಲೀನಾಂ = ಶ್ರೇಷ್ಠವಾದ ಮುಕ್ತಾಫಲಗಳ (ಮುತ್ತುಗಳ) ಸಾಲುಗಳ, **ಅಭಿಮತವಸತಿಃ** = ತಕ್ಕ ಆವಾಸಸ್ಥಾನವಾಗಿರುವ, **ತಾಸು** = ಆ ಮುಕ್ತಾಫಲಗಳ ಸಾಲುಗಳಲ್ಲಿ, **ಅನುಪ್ರವಿಷ್ಟಂ ಚ** = ಪ್ರವೇಶವನ್ನೂ ಮಾಡಿರುವ (ಶ್ರೇಷ್ಠರಾದ ಮುಕ್ತರ ಪಂಕ್ತಿಗಳಿಗೆ ಇಷ್ಟವಾದ ಆವಾಸಸ್ಥಾನವಾಗಿದ್ದು, ಆ ಮುಕ್ತಶ್ರೇಷ್ಠರ ಸಾಲುಗಳಲ್ಲಿ ನಿಯಾಮಕವಾಗಿ ಪ್ರವೇಶಮಾಡಿರುವ) **ವಿಮಲಸುಖಚಿತಾ** = ನಿರ್ಮಲವಾದ ಜ್ಞಾನ ಆನಂದರೂಪವಾದ, **ಸ್ವೇನ** = ತನ್ನ ಸ್ವರೂಪವಾಗಿರುವ, **ಬಂಧೇನ** = ಬಂಧಕದಿಂದ (ಪ್ರಕೃತಿಬಂಧದಿಂದ) (ಉದರಕ್ಕೆ ಬಂಧನರೂಪವಾದ ವಸ್ತ್ರರೂಪ ಅಲಂಕಾರದಿಂದ), **ಸ್ವೈರಂ** = ಯಥೇಚ್ಛವಾಗಿ, **ಬದ್ಧಂ ಅಪಿ** = ಕಟ್ಟಲ್ಪಟ್ಟಿದ್ದರೂ, **ಸ್ವತಂತ್ರಂ ಚ** = ಇನ್ನೊಬ್ಬರ ಅಧೀನವಲ್ಲದಿರುವ, **ನಿರ್ದೋಷಂ** = ದೋಷವಿಲ್ಲದಿರುವ, **ಗುಣಜುಷಾಂ** = ಜ್ಞಾನಾದಿಗುಣಗಳಿಂದ ಕೂಡಿದವರಿಗೆ (ಸತ್ತ್ವ,ರಜಸ್ಸು,ತಮಸ್ಸು ಎಂಬ ಗುಣಗಳನ್ನು ಹೊಂದಿರುವ ಸಂಸಾರಿಗಳಿಗೆ) **ದೋಷಪುಂಜಪ್ರಸವಿ** = (ಸಂಸಾರವಸ್ಥೆಯಲ್ಲಿ) ಅಜ್ಞಾನದುಃಖಾದಿ-ದೋಷಸಮೂಹಗಳನ್ನು ಉಂಟುಮಾಡುವ, **ಸದ್ಗುಣಾಢ್ಯಂ** = ನಿರ್ದೋಷವಾದ ಜ್ಞಾನ ಆನಂದಾದಿಗುಣಗಳಿಂದ ಶ್ರೇಷ್ಠವಾಗಿದ್ದರೂ, **ನಿರ್ಗುಣಂ** = ಗುಣರಹಿತವಾದ (ಸತ್ತ್ವಾದಿ-ಪ್ರಾಕೃತಗುಣರಹಿತವಾದ) **ಸರ್ಗೇಽಪಿ** = ಸೃಷ್ಟಿಕಾಲದಲ್ಲಿಯೂ, **ಗ್ರಸ್ತವಿಶ್ವಂ** = ತನ್ನ ಒಳಗೆ ಇಟ್ಟುಕೊಂಡಿರುವ ಪ್ರಪಂಚವುಳ್ಳ, **ಮಹತ್** = ಮಹಾಪರಿಮಾಣದಿಂದ ಕೂಡಿರುವ, **ತನು** = ಕೃಶವಾದ (ಅಲ್ಪಪರಿಮಾಣವುಳ್ಳ) **ಇತ್ಥಂ** = ಹೀಗೆ, **ಚಿತ್ರಂ** = ಆಶ್ಚರ್ಯಕರವಾದ ಶಕ್ತಿಗಳಿಂದ ಕೂಡಿದ , (**ವಿಷ್ಣೋಃ** = ಶ್ರೀಮನ್ನಾರಾಯಣನ) **ಉದರಂ** = ಹೊಟ್ಟೆಯು, **ನಃ** = ನಮ್ಮನ್ನು, **ಪಾತು** = ರಕ್ಷಿಸಲಿ.

**ತಾತ್ಪರ್ಯ–** ಈ ಪದ್ಯದಿಂದ ಶ್ರೀಹರಿಯ ಹೊಟ್ಟೆಯನ್ನು ಸ್ತುತಿಸುತ್ತಾರೆ-ಶ್ರೀಮನ್ನಾರಾಯಣನ ಉದರವು ಮುಕ್ತಾಗ್ರಣಿಗಳ (ಶ್ರೇಷ್ಠವಾದ ಮುತ್ತುಗಳ) ಸಾಲಿಗೆ ಇಷ್ಟವಾದ ಆವಾಸಸ್ಥಾನವಾಗಿದೆ ಮತ್ತು ಆ ಮುಕ್ತಾಗ್ರಣಿಗಳ (ಶ್ರೇಷ್ಠ ಮುತ್ತುಗಳ) ಪಂಕ್ತಿ-

ಯಲ್ಲಿ ತಾನೂ ಪ್ರವೇಶಿಸಿದೆ ಇದು ವಿರುದ್ಧವು. ಲೋಕದಲ್ಲಿ ಮುಕ್ತಾವಲಿಗೆ ಆಶ್ರಯವಾದುದು ಮುಕ್ತಾವಲಿಯನ್ನು ಪ್ರವೇಶಿಸಿರುವುದಿಲ್ಲ. ಆದರೆ ಪರಮಾತ್ಮನ ಉದರವು ಬಂಧದನಾಶವುಳ್ಳ ಮುಕ್ತರಿಗೆ ಆಶ್ರಯವಾಗಿದೆ ಮತ್ತು ತಾನು ನಿಯಾಮಕವಾಗಿ ಆ ಮುಕ್ತರಲ್ಲಿ ಪ್ರವೇಶಿಸಿದೆ. ಎಂದು ಪರಮಾತ್ಮನಲ್ಲಿ ಲೋಕವಿರುದ್ಧವಾದ ಧರ್ಮವಿದೆಯೆಂದು ವರ್ಣಿಸಿದ್ದಾರೆ. ದೇವದೇವನ ಉದರವು ನಿರ್ಮಲವಾದ ಆನಂದಜ್ಞಾನರೂಪವಾದ ಸ್ವರೂಪವೇ ಆದ ಬಂಧಕದಿಂದ ಬದ್ಧವಾಗಿದೆ. ಆದರೆ ಸ್ವತಂತ್ರವೂ ಆಗಿದೆ. ಬದ್ಧವಾದರೂ ಅಂದರೆ ಪ್ರಕೃತಿಬದ್ಧವಾದರೂ ಸ್ವತಂತ್ರವೆಂದು ವಿರೋಧವು ಮೇಲ್ನೋಟಕ್ಕೆ ಕಂಡು ಬರುತ್ತದೆ. ಉದರದ ಅಲಂಕಾರರೂಪವಾದ ವಸ್ತ್ರದಿಂದ ಬದ್ಧವಾಗಿದ್ದರೂ ಸ್ವತಂತ್ರವಾಗಿದೆ ಎಂದು ವಿರೋಧಪರಿಹಾರವನ್ನು ಇಟ್ಟುಕೊಳ್ಳಬೇಕು. ಪರಮಾತ್ಮನ ಉದರವು ಸತ್ತ್ವಾದಿಗುಣಸಮುದಾಯವನ್ನು ಹೊಂದಿರುವ ಜೀವರಿಗೆ ಅನೇಕ ದೋಷಸಮುದಾಯವನ್ನುಂಟು ಮಾಡುತ್ತದೆ. ಜ್ಞಾನಾದಿಗುಣವನ್ನು ಹೊಂದಿರುವವರಿಗೆ ದೋಷಪ್ರದ ಎಂದು ಆಪಾತದಿಂದ ತೋರುವ ವಿರೋಧವನ್ನು, ಗುಣಪದಕ್ಕೆ ಸತ್ತ್ವಾದಿಗುಣ ಎಂಬ ಅರ್ಥವನ್ನು ಇಟ್ಟುಕೊಂಡಾಗ ಪರಿಹಾರವಾಗುತ್ತದೆ. ನಿರ್ದೋಷವಾದ ಜ್ಞಾನಾನಂದಾದಿಗುಣಗಳಿಂದ ಕೂಡಿದ್ದರೂ 'ನಿರ್ಗುಣವು' ಜ್ಞಾನಾನಂದಾದಿಗುಣರಹಿತವು. ಇದು ವಿರುದ್ಧ ಎಂಬ ಶಂಕೆ ಬಂದಾಗ ನಿರ್ಗುಣ ಎಂದರೆ ಸತ್ತ್ವಾದಿಪ್ರಾಕೃತಗುಣರಹಿತ ಎಂಬ ಅರ್ಥವನ್ನು ಮಾಡಬೇಕು. ಪ್ರಲಯಕಾಲದಲ್ಲಿ ಮಾತ್ರವಲ್ಲ, ಸೃಷ್ಟಿಕಾಲದಲ್ಲಿಯೂ ಎಲ್ಲಾ ಪ್ರಪಂಚವನ್ನು ನುಂಗಿ ತನ್ನಲ್ಲಿಟ್ಟುಕೊಂಡಿರುತ್ತದೆ. ವ್ಯಾಪ್ತರೂಪನಾದ ಹರಿಯ ಉದರದಲ್ಲಿ ಸೃಷ್ಟಿಕಾಲದಲ್ಲಿಯೂ ಜಗತ್ತು ಇರುತ್ತದೆ ಎಂದು ಅರ್ಥ ಇಟ್ಟುಕೊಂಡಾಗ ವಿರೋಧ ಪರಿಹಾರವಾಗುತ್ತದೆ. ಆದ್ದರಿಂದಲೇ ಪರಮಾತ್ಮನ ಉದರವು ಮಹಾಪರಿಮಾಣವುಳ್ಳದ್ದು. ಆದರೂ ಅತ್ಯಂತ ಕೃಶವಾಗಿರುತ್ತದೆ. ಇಲ್ಲಿ ಏಕಕಾಲದಲ್ಲಿ ದೊಡ್ಡದೂ ಮತ್ತು ಚಿಕ್ಕದೂ ಆಗಿರುವುದು ವಿರುದ್ಧ. ಪ್ರಲಯಕಾಲದಲ್ಲಿ ಪ್ರಪಂಚವನ್ನು ನುಂಗಿದ್ದರಿಂದ ದೊಡ್ಡದು, ಸೃಷ್ಟಿಕಾಲದಲ್ಲಿ, ಹೊಟ್ಟೆಯಲ್ಲಿ ಏನೂ ಇಲ್ಲದ್ದರಿಂದ ಕೃಶವಾಗಿದೆ ಎಂದೂ ಹೇಳಲು ಬರುವುದಿಲ್ಲ. ಸೃಷ್ಟಿಕಾಲದಲ್ಲಿಯೂ ವ್ಯಾಪ್ತವಾದ್ದರಿಂದ ವಿಶ್ವವನ್ನು ತನ್ನಲ್ಲಿ ಇಟ್ಟುಕೊಂಡಿರುತ್ತದೆ ಎಂದು ಹೇಳಿರುವುದರಿಂದ ಹಾಗೆ ವಿರೋಧಪರಿಹಾರಮಾಡಲು ಸಾಧ್ಯವಿಲ್ಲ. ಈಶ್ವರನ ಅಚಿಂತ್ಯಾದ್ಭುತಶಕ್ತಿಯಿಂದ

ಒಂದೇ ಕಾಲದಲ್ಲಿ ಒಂದೇ ವಸ್ತುವಿನಲ್ಲಿ ಮಹತ್ತ್ವ ಮತ್ತು ಅಣುತ್ವಗಳು (ದೊಡ್ಡದಾಗಿ-ರುವಿಕೆ ಮತ್ತು ಚಿಕ್ಕದಾಗಿರುವಿಕೆಗಳು) ಕೂಡಬಹುದು ಎಂದು ವಿರೋಧವನ್ನು ಪರಿಹರಿಸಿಕೊಳ್ಳಬೇಕು. ಹೀಗೆ ವಿಚಿತ್ರಶಕ್ತಿಯಿಂದ ಕೂಡಿರುವ ವಿಷ್ಣುವಿನ ಉದರವು ನಮ್ಮನ್ನು ಕಾಪಾಡಲಿ ಎಂದು ಭಾವ. (ಇಲ್ಲಿ ಈಶ್ವರನ ಉದರಕ್ಕೂ ಅವನಿಗೂ ಭೇದ-ವಿಲ್ಲದ್ದರಿಂದ ಉದರಾದಿ ಅವಯವಗಳು ಕಾಪಾಡಲಿ ಎಂಬ ಪ್ರಾರ್ಥನೆಯು ಯುಕ್ತ-ವಾಗಿದೆ.) ಇಲ್ಲಿ ವಿರೋಧಾಭಾಸಾಲಂಕಾರವಿದೆ.

**ಲಕ್ಷ್ಮ್ಯಾ ವಕ್ಷಃಶ್ರಿತಾಯಾಃ ಪ್ರತಿಕೃತಿಭಿರಿಹಾಧ್ಯಾಸನೇನೋಲ್ಲಸಂತ್ಯಾ-**
**ಲೋಲಂತ್ಯಾಂದೋಲಿಕೇವ ಕ್ಷಣರುಚಿರುಚಿರೈರಂಜಿತಾರ್ಧಾತದುಸ್ರೈಃ।**
**ಮುಕ್ತಾಮಾಲಾ ವಿಮುಕ್ತದ್ರುಹಿಣಗಣತನುರ್ನಿತ್ಯಮುಕ್ತಸ್ಯ ಕಂಠೇ**
**ಭಕ್ತ್ಯಾಸಕ್ತಾ ವಿಮುಕ್ತ್ಯೈ ಭವತು ಭವಭಯಾದ್ ಭೂಯಸೋ ಭಾವಿತಾ ನಃ ॥೧೯**

**ವ್ಯಾಖ್ಯಾನ–** ಮುಕ್ತಾಮಾಲಾಂ ವರ್ಣಯತಿ– **ಲಕ್ಷ್ಮ್ಯಾ** ಇತಿ ॥ ವಕ್ಷಃಶ್ರಿತಾಯಾಃ ವಕ್ಷಃಸ್ಥಲಾಶ್ರಿತಾಯಾಃ ಲಕ್ಷ್ಮ್ಯಾಃ ಪ್ರತಿಕೃತಿಭಿಃ ಪ್ರತಿಬಿಂಬೈಃ ಇಹ ಮುಕ್ತಾಮಾಲಾಯಾಂ ಅಧ್ಯಾಸನೇನ ಉಪವೇಶನೇನ ಉಲ್ಲಸಂತೀ । ಲಕ್ಷ್ಮ್ಯಾಃ ಆಂದೋಲಿಕೇವ ಆಲೋ-ಲಂತೀ ಸಮಂತಾತ್ ಚಲಂತೀ, ಮುಕ್ತಾಮಾಲಾಯಾಂ ವಕ್ಷಃಸ್ಥಲಸ್ಥಿತಲಕ್ಷ್ಮೀಪ್ರತಿಬಿಂಬನೇ ಸತಿ ಲಕ್ಷ್ಮೀಃ ಸ್ವಯಮೇವ ಮುಕ್ತಾಮಾಲಾಲಕ್ಷಣಾಂದೋಳಿಕಾಂ ಅಧಿರೂಢೇವ ದೃಶ್ಯತೇ ಇತ್ಯರ್ಥಃ । ಕ್ಷಣರುಚಿರುಚಿರೈಃ ಕ್ಷಣರುಚಿಃ ವಿದ್ಯುತ್, ಆಕಾಲಿಕೀ ಕ್ಷಣರುಚಿರ್ವಿದ್ಯುದಿತಿ ಧನಂಜಯಃ, ತದ್ವದ್ ರುಚಿರೈಃ ಮನೋಹರೈಃ ತದುಸ್ರೈಃ ತಸ್ಯಾಃ ಉಸ್ರೈಃ ಕಿರಣೈಃ, ಕಿರಣೋಸ್ರಮಯೂಖಾಂಶುಗಭಸ್ತಿಘೃಣಿಘೃಷ್ಟಯಃ ಇತ್ಯಮರಃ, ರಂಜಿತಾರ್ಧಾ ಲೋಹಿತೀಕೃತಾರ್ಧಭಾಗಾ, ವಿಮುಕ್ತದ್ರುಹಿಣಗಣತನುಃ ದ್ರುಹಿಣಾಃ ಚತುರ್ಮುಖ-ಬ್ರಹ್ಮಾಣಃ, ಧಾತಾಬ್ಜಯೋನಿರ್ದ್ರುಹಿಣಃ ಇತ್ಯಮರಃ, ವಿಮುಕ್ತನಾಂ ದ್ರುಹಿಣಾನಾಂ-ಚತುರ್ಮುಖಬ್ರಹ್ಮಣಾಂ ಗಣಸ್ಯ ತನುಃ ಶರೀರಮಿವ, ತದಭಿಮನ್ಯಮಾನತ್ವಾತ್, ಭಕ್ತ್ಯಾ ಭಾಗೇನ ನಿತ್ಯಮುಕ್ತಸ್ಯ ಶ್ರೀವಿಷ್ಣೋಃ ಕಂಠೇ ಸಕ್ತಾ ಸಂಬದ್ಧಾ। ಅಥವಾ ಭಕ್ತೈರಿತಿ ಶೇಷಃ, ಭಕ್ತೈಃ ಭಕ್ತ್ಯಾ ಮಾಹಾತ್ಮ್ಯಜ್ಞಾನಪೂರ್ವಕಸುದೃಢಸ್ನೇಹೇನ ಸಕ್ತಾ ಸಂಜಿತಾ, ಅಂತರ್ಣೀತಣ್ಯರ್ಥಾತ್ ಸಂಜೇಃ ಕ್ತಃ । ಅಥವಾ ಮುಕ್ತಾಮಾಲಾಯಾಃ ಚಿದಾತ್ಮಕತ್ವಾತ್

ಭಕ್ತ್ಯಾ ಸ್ವಯಂ ಸಕ್ತಾ, ಮುಕ್ತಾಮಾಲಾ ಭಾವಿತಾ ಧ್ಯಾತಾ ಸತೀ, ಭಕ್ತ್ಯಾ ಇತ್ಯಸ್ಯ ಭಾವಿತೇತ್ಯನೇನ ವಾ ಸಂಬಂಧಃ, ತಥಾ ಚ ಭಕ್ತ್ಯಾ ಮಾಹಾತ್ಮ್ಯಜ್ಞಾನಪೂರ್ವಕ-ಸುದೃಢಸ್ನೇಹೇನ ಭಾವಿತೇತ್ಯರ್ಥಃ। ನಃ ಅಸ್ಮಾಕಂ ಭೂಯಸಃ ಬಹಳಾತ್, ಭವಭಯಾತ್ ಸಂಸಾರಭಯಾತ್ ವಿಮುಕ್ತ್ಯೈ ಮೋಕ್ಷಾಯ ಭವತು । ಅಮುಕ್ತಾನಾಂ ಮೋಕ್ಷ-ದಾತೃತ್ವಾಸಂಭವೇಽಪಿ ಮುಕ್ತಾನಾಂ ಮೋಕ್ಷದಾತೃತ್ವಂ ಸಂಭಾವಿತಮಿತಿ ವ್ಯಂಗ್ಯೋಽರ್ಥಃ ॥೧೯॥

**ಅನ್ವಯ–** ವಕ್ಷಃಶ್ರಿತಾಯಾಃ ಲಕ್ಷ್ಮ್ಯಾಃ ಪ್ರತಿಕೃತಿಭಿಃ ಇಹ ಅಧ್ಯಾಸನೇನ ಉಲ್ಲಸಂತೀ, (ಲಕ್ಷ್ಮ್ಯಾಃ) ಆಂದೋಲಿಕೇವ ಆಲೋಲಂತೀ, ಕ್ಷಣರುಚಿರುಚಿರೈಃ ತದುಸ್ರೈಃ ರಂಜಿತಾರ್ಧಾ, ವಿಮುಕ್ತದ್ರುಹಿಣಗಣತನುಃ ಭಕ್ತ್ಯಾ ನಿತ್ಯಮುಕ್ತಸ್ಯ ಕಂಠೇ ಸಕ್ತಾ, (ಭಕ್ತೈಃ) (ಭಕ್ತ್ಯಾ ನಿತ್ಯ-ಮುಕ್ತಸ್ಯ ಕಂಠೇ ಸಕ್ತಾ) (ಭಕ್ತ್ಯಾ)(ಸ್ವಯಂ) (ನಿತ್ಯಮುಕ್ತಸ್ಯ ಕಂಠೇ ಸಕ್ತಾ) ಮುಕ್ತಾಮಾಲಾ (ಭಕ್ತ್ಯಾ) ಭಾವಿತಾ ಸತೀ ನಃ ಭೂಯಸಃ ಭವಭಯಾತ್ ವಿಮುಕ್ತ್ಯೈ ಭವತು।

**ಅನ್ವಯಾರ್ಥ– ವಕ್ಷಃಶ್ರಿತಾಯಾಃ** = ಶ್ರೀಹರಿಯ ವಕ್ಷಃಸ್ಥಲವನ್ನು ಆಶ್ರಯಿಸಿರುವ, **ಲಕ್ಷ್ಮ್ಯಾಃ** = ಮಹಾಲಕ್ಷ್ಮೀದೇವಿಯ, **ಪ್ರತಿಕೃತಿಭಿಃ** = ಪ್ರತಿಬಿಂಬಗಳಿಂದ, **ಇಹ** = ಮುತ್ತಿನ ಸರದಲ್ಲಿ, **ಅಧ್ಯಾಸನೇನ** = ಯಾವಾಗಲೂ ವಾಸಮಾಡಲ್ಪಡುವುದರಿಂದ, **ಉಲ್ಲಸಂತೀ** = ಪ್ರಕಾಶಿಸುತ್ತಿರುವ, (**ಲಕ್ಷ್ಮ್ಯಾಃ** = ಆ ಮಹಾಲಕ್ಷ್ಮೀದೇವಿಯ ) **ಆಂದೋಲಿಕೇವ** = ಉಯ್ಯಾಲೆಯಂತೆ, **ಆಲೋಲಂತೀ** = ಇತ್ತ ಅತ್ತ ಚಲಿಸುತ್ತಿರುವ, **ಕ್ಷಣರುಚಿರುಚಿರೈಃ** = ಮಿಂಚಿನಂತೆ ಮನೋಹರವಾಗಿರುವ, **ತದುಸ್ರೈಃ** = ಆ ದೇವಿಯ ಕಿರಣಗಳಿಂದ, **ರಂಜಿತಾರ್ಧಾ** = ಕೆಂಪಾಗಿ ಮಾಡಲ್ಪಟ್ಟ ಅರ್ಧಭಾಗವುಳ್ಳ, **ವಿಮುಕ್ತದ್ರುಹಿಣಗಣತನುಃ** **ವಿಮುಕ್ತ** = ಸಂಸಾರಬಂಧವನ್ನು ಕಳೆದುಕೊಂಡಿರುವ, **ದ್ರುಹಿಣ** = ಚತುರ್ಮುಖ ಬ್ರಹ್ಮ-ದೇವರುಗಳ, **ತನುಃ** = ಶರೀರದಂತಿರುವ, (ಮುಕ್ತಬ್ರಹ್ಮರುಗಳೇ ಅಭಿಮಾನಿಗಳಾಗಿ ಉಳ್ಳ), **ಭಕ್ತ್ಯಾ** = ಒಂದು ಭಾಗದಿಂದ, **ನಿತ್ಯಮುಕ್ತಸ್ಯ** = ಯಾವಾಗಲೂ ಬಂಧರಹಿತನಾದ ಶ್ರೀವಿಷ್ಣುವಿನ, **ಕಂಠೇ** = ಕುತ್ತಿಗೆಯಲ್ಲಿ, **ಸಕ್ತಾ** = ಸಂಬಂಧವನ್ನು ಹೊಂದಿರುವ, (**ಭಕ್ತೈಃ** = ಭಕ್ತರಿಂದ, **ಭಕ್ತ್ಯಾ** = ಮಾಹಾತ್ಮ್ಯಜ್ಞಾನ ಪೂರ್ವಕವಾದ ಸುದೃಢಸ್ನೇಹದಿಂದ, **ನಿತ್ಯ-ಮುಕ್ತಸ್ಯ ಕಂಠೇ ಸಕ್ತಾ** = ನಿತ್ಯಮುಕ್ತನಾದ ಶ್ರೀಹರಿಯ ಕಂಠದಲ್ಲಿ ಅರ್ಪಿಸಲ್ಪಟ್ಟ) (**ಭಕ್ತ್ಯಾ**

ನಿತ್ಯಮುಕ್ತಸ್ಯ ಕಂಠೇ ಸಕ್ತಾ = ಮುತ್ತಿನ ಮಾಲೆಯು ಚಿದಾತ್ಮಕವಾದುದರಿಂದ, ಹಿಂದೆ ಹೇಳಿದಂತಹ ಭಕ್ತಿಯಿಂದ ಶ್ರೀಹರಿಯ ಕಂಠದಲ್ಲಿ ತಾನಾಗಿಯೇ ಸಂಬಂಧವನ್ನು ಹೊಂದಿರುವ) ಮುಕ್ತಾಮಾಲಾ = ಮುತ್ತಿನ ಸರವು, (ಭಕ್ತ್ಯಾ = ಹಿಂದೆ ಹೇಳಿದ ಸ್ವರೂಪವುಳ್ಳ ಭಕ್ತಿಯಿಂದ) ಭಾವಿತಾಸತೀ = ಧ್ಯಾನಮಾಡಲ್ಪಟ್ಟದ್ದಾಗಿ, ನಃ = ನಮಗೆ, ಭೂಯಸಃ = ಬಹಳವಾದ, ಭವಭಯಾತ್ = ಸಂಸಾರಭಯದ ದೆಸೆಯಿಂದ, ವಿಮುಕ್ತ್ಯೈ = ಬಿಡುಗಡೆಗೋಸ್ಕರ, ಭವತು = ಆಗಲಿ.

ತಾತ್ಪರ್ಯ– ಈಗ ಶ್ರೀಮಹಾವಿಷ್ಣುವಿನ ಕಂಠದಲ್ಲಿರುವ ಮುತ್ತಿನ ಸರವನ್ನು ವರ್ಣಿಸುತ್ತಾರೆ – ಲಕ್ಷ್ಮೀದೇವಿಯು ಶ್ರೀಹರಿಯ ಎಡಭಾಗದ ಎದೆಯಲ್ಲಿ ರತ್ನಪುಂಜದ ಪ್ರಕಾಶದಿಂದ ಕೂಡಿ ವಿರಾಜಮಾನಳಾಗಿದ್ದಾಳೆ. ಶ್ರೀಹರಿಯು ಧರಿಸಿದ ಮುತ್ತಿನ ಮಾಲೆಯ ಸ್ಥೂಲವಾದ ಮುತ್ತುಗಳಲ್ಲಿ ಲಕ್ಷ್ಮೀದೇವಿಯ ಪ್ರತಿಬಿಂಬಗಳು ಬಿದ್ದು ಸುಂದರವಾಗಿ ಶೋಭಿಸುತ್ತಾ ಇರುತ್ತವೆ. ಮುತ್ತಿನಸರವು ಚಲಿಸುವಾಗ ಲಕ್ಷ್ಮೀದೇವಿಯು ಉಯ್ಯಾಲೆಯಲ್ಲಿ ಇತ್ತ ಅತ್ತ ಚಲಿಸುತ್ತಾ ವಿಹಾರಮಾಡುವಂತೆ ಕಂಡುಬರುತ್ತದೆ. ಮಿಂಚಿನಂತಹ ಶ್ರೀಲಕ್ಷ್ಮಿಯ ದೇಹದ ಕಿರಣಗಳಿಂದ ಮುತ್ತಿನ ಸರದ ಒಂದು ಭಾಗವು ಕೆಂಪುಹಳದಿಬಣ್ಣದಿಂದ ರಂಜಿತವಾಗಿ ಮನೋಹರವಾಗಿರುತ್ತದೆ. ಮುಕ್ತರಾದ ಚತುರ್ಮುಖಬ್ರಹ್ಮದೇವರುಗಳೇ ಅಭಿಮಾನಿಗಳಾಗಿ ಉಳ್ಳ ಈ ಸರವು ಅವರ ಶರೀರದಂತಿದೆ. ಇಂತಹ ಮುತ್ತಿನ ಸರವು ತನ್ನ ಒಂದು ಭಾಗದಿಂದ (ಮೇಲ್ಭಾಗದಿಂದ ) ಶ್ರೀ ಹರಿಯ ಕಂಠವನ್ನು ಆಲಿಂಗಿಸಿಕೊಂಡಿದೆ. ಭಕ್ತಶ್ರೇಷ್ಠರಾದ ವಿಮುಕ್ತಬ್ರಹ್ಮಾದಿಗಳು ಮಾಹಾತ್ಮ್ಯಜ್ಞಾನ ಪೂರ್ವಕವಾದ ಸುದೃಢಸ್ನೇಹದಿಂದ ಶ್ರೀಹರಿಯ ಕಂಠಕ್ಕೆ ಅರ್ಪಿಸಿದ ಈ ಮುತ್ತಿನ ಮಾಲೆಯು, ಸ್ವತಃ ಚಿತ್ (ಚೇತನ) ಸ್ವರೂಪಿಯಾದ್ದರಿಂದ ತಾನಾಗಿಯೇ ಭಕ್ತಿಯಿಂದ ಶ್ರೀಹರಿಯ ಕಂಠವನ್ನೂ ಎದೆಯನ್ನೂ ಅಪ್ಪಿಕೊಂಡಿದೆ. ಇಂತಹ ಮುತ್ತಿನಮಾಲೆಯನ್ನು ಶ್ರೀಹರಿಯ ಮಹಾಮಹಿಮೆಯನ್ನು ಅರಿತಾಗ ಉಂಟಾಗುವ ಸುದೃಢಸ್ನೇಹರೂಪವಾದ ಪರಭಕ್ತಿಯಿಂದ ನಾವು ಧ್ಯಾನ ಮಾಡುತ್ತೇವೆ. ಅದು ಬಹಳವಾಗಿರುವ ನಮ್ಮ ಸಂಸಾರಭಯಕ್ಕೆ ವಿಮುಕ್ತಿಯನ್ನು (ಭಯಪರಿಹಾರವನ್ನು ) ಮಾಡಲಿ ಎಂದು ಪ್ರಾರ್ಥಿಸಿದ್ದಾರೆ. (ಅಮುಕ್ತರು ಇತರರನ್ನು ಮುಕ್ತರನ್ನಾಗಿ ಮಾಡಲಾರರು. ಈ ಮಾಲೆಯು ಮುಕ್ತಾಮಾಲೆಯಾದ್ದರಿಂದ ನಮ್ಮನ್ನು

ಭಯಮುಕ್ತರನ್ನಾಗಿ, ವಿಮುಕ್ತರನ್ನಾಗಿಮಾಡಲು ಸಮರ್ಥವಾಗಿದೆ ಎಂಬ ಅರ್ಥವು ಧ್ವನಿತವಾಗುತ್ತದೆ).

**ಧ್ಯೇಯಂ ಧೀರೈಶ್ಚಿರಂ ತದ್ವಿಕಟಮಣಿಶಿಲಾಮಂಡಲೋದ್ಭಾಸಿ ವಕ್ಷೋ**
**ಯಸ್ಮಿನ್ ವಿಸ್ಮಾಪಯಂತೀ ಭುವನಮತುಲಯಾ ಲೀಲಯೋಲ್ಲಾಸಿನೀ ಶ್ರೀಃ।**
**ಯಸ್ಯಾ ಆಸ್ಯೇಂದುಕಾಂತ್ಯಾ ವಿಮಲವಿತತಯಾ ನ್ಯಕ್ಕೃತಶ್ಚಕ್ರಪಾಣೇಃ**
**ಪ್ರೋದ್ಯತ್ಪ್ರದ್ಯೋತನೌಘಂ ದ್ಯುತಿಭಿರಭಿನುದನ್ ಕೌಸ್ತುಭಃ ಕಂಠವೇಷಃ ॥೨೦॥**

**ವ್ಯಾಖ್ಯಾನ–** ವಕ್ಷಃಸ್ಥಲಂ ಸ್ತೌತಿ–**ಧ್ಯೇಯಮಿತಿ ॥** ವಿಮಲವಿತತಯಾ ವಿಮಲಯಾ ವಿಸ್ತೀರ್ಣಯಾ ಚ ಯಸ್ಯಾಃ ಲಕ್ಷ್ಮ್ಯಾಃ ಆಸ್ಯೇಂದುಕಾಂತ್ಯಾ, ಪ್ರೋದ್ಯತ್ಪ್ರದ್ಯೋತ-ನೌಘಂ, ಪ್ರಕರ್ಷೇಣ ಉದ್ಯತಾಂ ಪ್ರದ್ಯೋತನಾನಾಂ ಸೂರ್ಯಾಣಾಂ, ಪ್ರದ್ಯೋ-ತನೋ ದಿನಮಣಿಃ ಖದ್ಯೋತೋ ಲೋಕಬಾಂಧವಃ ಇತ್ಯಮರಃ, ಓಘಂ ಸಮುದಾಯಂ, ದ್ಯುತಿಭಿಃ ಸ್ವಕಾಂತಿಭಿಃ ಅಭಿನುದನ್ ತಿರಸ್ಕುರ್ವನ್, ಚಕ್ರಪಾಣೇಃ, ಚಕ್ರಂ ಪಾಣೌ ಯಸ್ಯ ತಸ್ಯ ವಿಷ್ಣೋಃ ಕಂಠವೇಷಃ ಕಂಠಾಲಂಕಾರಃ, ಆಕಲ್ಪವೇಷೌ ನೇಪಥ್ಯಂ ಇತ್ಯಮರಃ, ಕೌಸ್ತುಭಃ ಕೌಸ್ತುಭನಾಮಕೋ ಮಣಿಃ ನ್ಯಕ್ಕೃತಃ ತಿರಸ್ಕೃತಃ, ಅತುಲಯಾ ಅಸದೃಶ್ಯಾ ಲೀಲಯಾ ಬ್ರಹ್ಮಾದ್ಯುತ್ಪಾದನರೂಪಯಾ ಭುವನಂ ಲೋಕಂ ವಿಸ್ಮಾಪಯಂತೀ ಆಶ್ಚರ್ಯಯುಕ್ತಂ ಕುರ್ವತೀ, ಉಲ್ಲಾಸಿನೀ ಉತ್ಕೃಷ್ಟಂ ಯಥಾ ಭವತಿ ತಥಾ ಲಸತಿ ಇತಿ ಉಲ್ಲಾಸಿನೀ ಉತ್ಕೃಷ್ಟಕಾಂತಿಮತೀ ಸಾ ಶ್ರೀಃ ಯಸ್ಮಿನ್ ವಕ್ಷಸಿ ವರ್ತತೇ, ವಿಕಟಮಣಿಶಿಲಾಮಂಡಲೋದ್ಭಾಸಿ, ವಿಕಟಾಃ ರಮ್ಯಾಃ, ವಿಕಟಃ ಪೃಥುಲೇ ರಮ್ಯೇ ವಿಶಾಲವಿಕರಾಳಯೋಃ ಇತಿರತ್ನಮಾಲಾ, ಮಣಿಶಿಲಾಃ ರತ್ನಲಕ್ಷಣಪಾಷಾಣಾಃ ತೇಷಾಂ ಮಂಡಲೇನ ಸಮೂಹೇನ, ಉತ್ಕೃಷ್ಟಂ ಭಾಸತೇ ಇತ್ಯುದ್ಭಾಸಿ, ಶ್ರೀವಿಷ್ಣೋಃ ತತ್ ವಕ್ಷಃ ಧೀರೈಃ ಧಿಯಾ ರಮಂತೇ ಇತಿ ಧೀರಾಃ ಜ್ಞಾನಿನಃ ತೈಃ, ಚಿರಂ ಬಹುಕಾಲಂ ಧ್ಯೇಯಂ ಧ್ಯಾತವ್ಯಮ್ । ಪ್ರೈಷಾತಿಸರ್ಗಪ್ರಾಪ್ತಕಾಲೇಷು ಕೃತ್ಯಾಶ್ಚ (೩-೩-೧೬೩) ಇತಿ ವಿಧೌ ಯತ್ ಪ್ರತ್ಯಯಃ ॥೨೦॥

**ಅನ್ವಯ–** ವಿಮಲವಿತತಯಾ, ಯಸ್ಯಾಃ ಆಸ್ಯೇಂದುಕಾಂತ್ಯಾ ಪ್ರೋದ್ಯತ್-ಪ್ರದ್ಯೋತನೌಘಂ ದ್ಯುತಿಭಿಃ ಅಭಿನುದನ್, ಚಕ್ರಪಾಣೇಃ ಕಂಠವೇಷಃ ಕೌಸ್ತುಭಃ ನ್ಯಕ್ಕೃತಃ

ಅತುಲಯಾ ಲೀಲಯಾ ಭುವನಂ ವಿಸ್ಮಾಪಯಂತೀ ಉಲ್ಲಾಸಿನೀ (ಸಾ)ಶ್ರೀಃ ಯಸ್ಮಿನ್ (ವರ್ತತೇ)ವಿಕಟಮಣಿಶಿಲಾಮಂಡಲೋದ್ಭಾಸಿ ತತ್ (ವಿಷ್ಣೋಃ) ವಕ್ಷಃ ಧೀರೈಃ ಚಿರಂ ಧ್ಯೇಯಂ।

**ಅನ್ವಯಾರ್ಥ–** **ವಿಮಲವಿತತಯಾ** = ನಿರ್ಮಲವಾಗಿಯೂ, ಹರಡಿಕೊಂಡೂ ಇರುವ, **ಯಸ್ಯಾಃ** = ಯಾವ ಲಕ್ಷ್ಮೀದೇವಿಯ, **ಆಸ್ಯೇಂದುಕಾಂತ್ಯಾ** = ಮುಖಚಂದ್ರನ ಕಾಂತಿಯಿಂದ, **ಪ್ರೋದ್ಯತ್ಪ್ರದ್ಯೋತನೌಘಂ** = ಚೆನ್ನಾಗಿ ಉದಯಿಸುತ್ತಿರುವ ಸೂರ್ಯರ ರಾಶಿಯನ್ನು, **ದ್ಯುತಿಭಿಃ** = ತನ್ನ ಕಾಂತಿಗಳಿಂದ, **ಅಭಿನುದನ್** = ತಿರಸ್ಕರಿಸು-ತ್ತಿರುವ, **ಚಕ್ರಪಾಣೇಃ**= ಸುದರ್ಶನಧಾರಿಯಾದ ಶ್ರೀಹರಿಯ, **ಕಂಠವೇಷಃ** = ಕಂಠಾ-ಲಂಕಾರವಾಗಿರುವ, **ಕೌಸ್ತುಭಃ** = ಕೌಸ್ತುಭಮಣಿಯು, **ನ್ಯಕ್ಕೃತಃ** = ತಿರಸ್ಕರಿಸಲ್ಪಟ್ಟಿದೆಯೋ, **ಅತುಲಯಾ** = ಎಣೆಯಿಲ್ಲದ, **ಲೀಲಯಾ** = ಬ್ರಹ್ಮಾದಿಗಳ ಸೃಷ್ಟಿ ಮೊದಲಾದ ಆಟದಿಂದ, **ಭುವನಂ** = ಲೋಕವನ್ನು, **ವಿಸ್ಮಾಪಯಂತೀ** = ಆಶ್ಚರ್ಯಗೊಳಿಸುತ್ತಿರುವ, **ಉಲ್ಲಾಸಿನೀ** = ಉತ್ಕೃಷ್ಟವಾದ ಕಾಂತಿಯುಳ್ಳ, **(ಸಾ) ಶ್ರೀಃ** = ಅಂತಹ ಲಕ್ಷ್ಮೀದೇವಿಯು, **ಯಸ್ಮಿನ್** = ಯಾವ ವಕ್ಷಃಸ್ಥಲದಲ್ಲಿ, **(ವರ್ತತೇ**= ಇರುತ್ತಾಳೋ**)** **ವಿಕಟಮಣಿಶಿಲಾಮಂಡಲೋ-ದ್ಭಾಸಿ**, **ವಿಕಟ** = ಮನೋಹರವಾದ, **ಮಣಿಶಿಲಾ** = ರತ್ನರೂಪವಾದ ಶಿಲೆಗಳ, **ಮಂಡಲ** = ಸಮೂಹದಿಂದ, **ಉದ್ಭಾಸಿ** = ಶೋಭಿಸುತ್ತಿರುವ, **(ವಿಷ್ಣೋಃ) ತತ್ ವಕ್ಷಃ** = ಶ್ರೀಹರಿಯ ಆ ವಕ್ಷಃಸ್ಥಲವು, **ಧೀರೈಃ** = ಜ್ಞಾನಿಗಳಿಂದ, **ಚಿರಂ** = ಬಹುಕಾಲದವರೆಗೆ, **ಧ್ಯೇಯಂ** = ಧ್ಯಾನಿಸಲ್ಪಡಬೇಕಾದುದು.

**ತಾತ್ಪರ್ಯ–** ಈ ಶ್ಲೋಕದಿಂದ ಶ್ರೀವಿಷ್ಣುವಿನ ವಕ್ಷಃಸ್ಥಲವನ್ನು ಸ್ತುತಿಸುತ್ತಾರೆ. ಶ್ರೀಹರಿಯ ಎದೆಯಲ್ಲಿ ಕೌಸ್ತುಭಮಣಿಯಿದೆ. ಅದು ಚೆನ್ನಾಗಿ ಉದಯಿಸುತ್ತಿರುವ ಸೂರ್ಯರ ರಾಶಿಯನ್ನೂ ತನ್ನ ಕಾಂತಿಗಳಿಂದ ತಿರಸ್ಕರಿಸುತ್ತದೆ. ಶ್ರೀಹರಿಯ ಎಡಭಾಗದ ಎದೆಯಲ್ಲಿರುವ ಲಕ್ಷ್ಮೀದೇವಿಯ ನಿರ್ಮಲ ಮತ್ತು ವಿಸ್ತಾರವಾದ ಮುಖಚಂದ್ರನ ಕಾಂತಿ-ಯಿಂದ ಚಕ್ರಪಾಣಿಯ ಕಂಠಾಲಂಕಾರವಾದ ಆ ಕೌಸ್ತುಭಮಣಿಯೂ ತಿರಸ್ಕೃತವಾಗಿದೆ. ಬ್ರಹ್ಮಾದಿಗಳ ಸೃಷ್ಟ್ಯಾದಿಗಳನ್ನು ಅನಾಯಾಸವಾಗಿ ಮಾಡುತ್ತಾ ಜ್ಞಾನಿವರೇಣ್ಯರಿಗೂ ಆಶ್ಚರ್ಯವನ್ನುಂಟುಮಾಡುತ್ತಿರುವ ಅಸಾಧಾರಣ ಲೀಲಾವತಿಯಾದ ಆ ಲಕ್ಷ್ಮೀದೇವಿಯು

ಶ್ರೀಹರಿಯ ಎದೆಯಲ್ಲಿ ವಿರಾಜಮಾನಳಾಗಿದ್ದಾಳೆ. ಮನೋಹರವಾದ ರತ್ನ ಸಮೂಹ-ಗಳಿಂದ ಅತ್ಯುತ್ಕೃಷ್ಟವಾಗಿ ಪ್ರಕಾಶಿಸುವ ಶ್ರೀಮನ್ಮಹಾವಿಷ್ಣುವಿನ ಆ ವಕ್ಷಃಸ್ಥಳವನ್ನು ಜ್ಞಾನಿಗಳು ಬಹುಕಾಲ ಆವಶ್ಯಕವಾಗಿ ಧ್ಯಾನಮಾಡಬೇಕು.

**ಸರ್ವಾಂಗೀಣೋಽಂಗರಾಗಃ ಪರಿಮಲಸುರಭಿಃ ಸುಂದರಶ್ಚಂದನಾದ್ಯೈಃ**
**ಮುಕ್ತಾಮಾಲಾ ಚ ಲಕ್ಷ್ಮೀಃ ಸ್ವಯಮತಿಲಲಿತಾ ರತ್ನರಾಜಶ್ಚ ರಾಜನ್ ।**
**ನಿಸ್ತಾಪಂ ನಿತ್ಯಭದ್ರಂ ಸ್ವರಸಸುರಭಿ ಚ ಶ್ರೀಪತೇರ್ಬಾಹುಮಧ್ಯಂ**
**ಲೋಕಪ್ರೇಕ್ಷಾಭಯಾದ್ವಾವೃಣತ ವರಗುಣಂ ಸ್ವಾತ್ಮಶೋಭೇಚ್ಛಯಾ ವಾ ॥೨೧॥**

**ವ್ಯಾಖ್ಯಾನ–** ನನು ಹರೇರ್ವಕ್ಷಃ ಮುಕ್ತಾಮಾಲಾಲಂಕೃತತ್ವೇನೈವ ಶೋಭಾವತ್, ನ ತು ಸ್ವತಃ ಶೋಭಾವತ್, ಅನ್ಯಥಾ ಮುಕ್ತಾಮಾಲಾವಿಧಾರಣಂ ವ್ಯರ್ಥಂ ಸ್ಯಾತ್ ಇತ್ಯತ ಆಹ-ಸರ್ವಾಂಗೀಣ ಇತಿ ॥ ಚಂದನಾದ್ಯೈಃ ಶ್ರೀಗಂಧಾದ್ಯೈಃ ಗಂಧಸಾರೋ ಮಲಯಜೋ ಭದ್ರಶ್ರೀಶ್ಚಂದನೋಽಸ್ತ್ರಿಯಾಂ ಇತ್ಯಮರಃ । ಕೃತಃ ಇತಿ ಶೇಷಃ, ಪರಿಮಳಸುರಭಿಃ ಪರಿಮಳೇನ ಸುಗಂಧಿಃ, ಸರ್ವಾಂಗೀಣಃ ಪರಿಮಳೇನ ಸರ್ವಮಂಗಂ ವ್ಯಾಪ್ನೋತೀತಿ ಖಪ್ರತ್ಯಯಃ । ಸುಂದರಃ ಶೋಭನಃ ಅಂಗರಾಗಃ ಅಂಗವಿಲೇಪನಃ, ಸಮಾಲಂಭೋ-ಽಂಗರಾಗಶ್ಚ ಪ್ರಸಾಧನವಿಲೇಪನಮ್ ಇತಿಧನಂಜಯಃ । ಮುಕ್ತಾಮಾಲಾ ಚ, ತಥಾ ಸ್ವಯಂ ಸ್ವಭಾವೇನೈವ ಅತಿಲಲಿತಾ ಅತಿಸುಂದರೀ ಲಕ್ಷ್ಮೀಃ, ತಥಾ ರಾಜನ್, ರಾಜತಿ ಪ್ರಕಾಶತೇ ಇತಿರಾಜನ್, ಲಟ್ಇತ್ಯನುವರ್ತಮಾನೇ ಪುನಃ ಲಟ್‌ಗ್ರಹಣಾತ್ ಪ್ರಥಮಾ-ಸಮಾನಾಧಿಕರಣೇಽಪಿ ಶತೃಪ್ರತ್ಯಯಃ, ರತ್ನರಾಜಃ ರತ್ನಶ್ರೇಷ್ಠಃ ಕೌಸ್ತುಭಶ್ಚ ಇತ್ಯೇತಾನಿ, ನಿಸ್ತಾಪಂ ನಿರ್ಗತತಾಪಂ, ನಿತ್ಯಭದ್ರಂ ನಿತ್ಯಮಂಗಳಂ, ಸ್ವರಸಸುರಭಿ ಚ ಸ್ವಭಾವೇನೈವ ಸುಗಂಧೋಪೇತಂ, ವರಗುಣಂ ನಿತ್ಯಭದ್ರಮಿತ್ಯಾದಿನಾ ಉಕ್ತೇಭ್ಯಃ ಅನ್ಯೈರಪಿ ಉತ್ತಮ-ಗುಣೈರ್ಯುಕ್ತಂ ಶ್ರೀಪತೇಃ ಲಕ್ಷ್ಮೀಪತೇಃ ಬಾಹುಮಧ್ಯಂ ವಕ್ಷಃಸ್ಥಲಂ ಲೋಕಪ್ರೇಕ್ಷಾ-ಭಯಾದ್ವಾಲೌಕಿಕಪುರುಷೇಕ್ಷಣಪ್ರಯುಕ್ತ ಸೌಂದರ್ಯಾದಿಗುಣಹ್ರಾಸಭಯಾದ್ ವಾ ಸ್ವಾತ್ಮಶೋಭೇಚ್ಛಯಾ ವಾ ಸ್ವಾತ್ಮನಾ ಶೋಭಾಪ್ರಾಪ್ತಿರ್ಭವತು ಇತೀಚ್ಛಯಾ ವಾ ಅವೃಣತ ಸ್ವೀಕೃತವಂತಿ । ಶ್ನಾವಿಕರಣಾತ್ ವೃಞ್‌ವರಣೇ ಇತ್ಯಸ್ಮಾತ್ ಕರ್ತರಿ ಲಙ್ ಆತ್ಮನೇಪದ ಬಹುವಚನಮ್ । ಹರೇರ್ವಕ್ಷಸಃ ನಿಸ್ತಾಪತ್ವಾತ್ ತಾಪಪರಿಹಾರಾರ್ಥಂ

ಶ್ರೀಗಂಧಧಾರಣಂ ನ ಭವತಿ, ಸ್ವತಃ ಸುರಭಿತ್ವಾಚ್ಚ ಸೌರಭ್ಯಾರ್ಥಮಪಿ ಶ್ರೀಗಂಧಲೇಪೋ ನ ಭವತಿ, ಸ್ವತಃ ಕೀರ್ತ್ಯಾದಿವರಗುಣೋಪೇತತ್ವಾಚ್ಚ ಕೀರ್ತ್ಯರ್ಥಂ ಮುಕ್ತಾಮಾಲಾ-ಧಾರಣಂ ನ ಭವತಿ ಕಿಂತು ಸ್ವಪ್ರಯೋಜನಾರ್ಥಮೇವ ಅಂಗರಾಗಾದಿನಾ ಭಗವದ್ವಕ್ಷಸ್ಥಲಮಾಶ್ರಿತಮಿತಿ ನ ತಥಾ ಧಾರಣಂ ವ್ಯರ್ಥಮಿತಿ ಭಾವಃ । ಕಿಂ ತೇಷಾಂ ಅಂಗರಾಗಾದೀನಾಂ ಭಗವದ್ವಕ್ಷಸ್ಥಲಾಶ್ರಯಣೇನ ಪ್ರಯೋಜನಮಿತಿ ಚೇತ್ ಏವಂ ಕಿಲ ಅಂಗರಾಗಾದಿಭಿಃ ವಿಚಾರಿತಂ 'ಅತಿಸುಂದರೈರಸ್ಮಾಭಿರನ್ಯತ್ರಾಶ್ರಯಣೇ ಕ್ರಿಯಾಮಾಣೇ ಕೀದೃಶಮೇತದತಿಸುಂದರಮಂಗರಾಗಾದಿಕಂ ! ಅಸ್ಮಾಕಮಪಿ ಇದಮಪೇಕ್ಷಿತಮಿತೀಚ್ಛಯಾ ದ್ರಕ್ಷ್ಯಂತಿ ಪಾಮರಾಃ, ತಥಾಚ ಅಸ್ಮಾಕಂ ಸೌಂದರ್ಯಾದಿ-ಹ್ರಾಸಃ ಸ್ಯಾತ್ । ಲೋಕೇ ಪಾಮರಜನಕುದೃಷ್ಟ್ಯಾ ಸುಂದರವಸ್ತೂನಾಂ ಗುಣಹ್ರಾಸ-ದರ್ಶನಾತ್ । ಭಗವದ್ವಕ್ಷಸ್ಥಲಾಶ್ರಯಣೇ ತು ಪಾಮರಜನಕುದೃಷ್ಟಿಪಾತೇಽಪಿ ಭಗವದ್ವಕ್ಷಸ್ಥಲಲಕ್ಷಣಾಧಿಷ್ಠಾನಮಹಿಮ್ನಾ ನಾಸ್ಮಾಕಂ ಸೌಂದರ್ಯಾದಿಹ್ರಾಸಃ ಸ್ಯಾತ್ । ಅಥವಾ ನಿಸ್ತಾಪತ್ವಾದ್ಯುಪೇತಸ್ಯ ಭಗವದ್ವಕ್ಷಸಃ ಕಿಮೇತೇ ಚಂದನಾದಯಃ ಪ್ರಯೋಜನಂ ಕರಿಷ್ಯಂತಿ? ಭಗವದ್ವಕ್ಷಃಸ್ಥಲಮೇವ ಸ್ವತಃಸುಂದರಮಿತಿ ಭಗವದ್ವಕ್ಷಃಸ್ಥಲ ಏವ ಲೋಕದೃಷ್ಟಿಃ ಸ್ಯಾತ್, ನಾಸ್ಮಾಸು । ಲೋಕೋ ಹಿ ಸುಂದರಾತಿಸುಂದರಯೋರ್ಮಧ್ಯೇ ಅತಿಸುಂದರಮೇವ ಪಶ್ಯತಿ ನ ತಥಾ ಸುಂದರಮ್ । ಭಗವದ್ವಕ್ಷಃಸ್ಥಲಂ ತು ಮಹಾಮಹಿಮೋಪೇತತ್ವಾತ್ ಪಾಮರಕುದೃಷ್ಟಿಪಾತೇಽಪಿ ನ ಸೌಂದರ್ಯಾದಿ-ಗುಣೈರ್ಹೀನಂ ಸ್ಯಾತ್' । ಇತಿ ವಿಚಾರ್ಯ ಸ್ವಪ್ರಯೋಜನಾರ್ಥಮೇವ ಭಗವದ್ವಕ್ಷಃಸ್ಥಲಮಾಶ್ರಿತವಂತಃ ಇತಿಭಾವಃ । ತದಿದಮುಕ್ತಂ ಲೋಕಪ್ರೇಕ್ಷಾಭಯಾದ್ವೇತಿ । ಅಂಗರಾಗಾದೀನಾಮಚೇತನತ್ವೇಽಪಿ ತದಭಿಮಾನಿದೇವತಾನಾಂ ಚೇತನತ್ವೇನ ವಿಚಾರಃ ಸಂಭವತಿ । ಅಥವಾ ಚಿದಾತ್ಮಕಾನಾಮಪಿ ಭಗವದಲಂಕಾರಾಣಾಂ ಸತ್ತ್ವಾತ್, ಅಥವಾ ಉತ್ಪ್ರೇಕ್ಷಾತ್ವಾನ್ನಾನುಪಪತ್ತಿಃ, ಅಥವಾ ಅತಿಶಯಿತಕಾಂತಿಮದ್ಭಗವದ್ವಕ್ಷಃಸ್ಥಳಾಶ್ರಯೇಣ ಅಸ್ಮಾಕಮಪಿ ಅತಿಶಯಿತಕಾಂತಿರ್ಭವತೀತಿ ಇಚ್ಛಯಾ ಸ್ವಪ್ರಯೋಜನಾರ್ಥಮೇವ ಭಗವದ್ವಕ್ಷಃಸ್ಥಲಂ ಆಶ್ರಿತಾಃ ಅಂಗರಾಗಾದಯಃ । ಇದಮಪ್ಯಭಿಹಿತಂ ಸ್ವಾತ್ಮಶೋಭೇ-ಚ್ಛಯಾವೇತಿ ॥೨೧॥

**ಅನ್ವಯ** – ಚಂದನಾದ್ಯೈಃ (ಕೃತಃ) ಪರಿಮಲಸುರಭಿಃ ಸರ್ವಾಂಗೀಣಃ ಸುಂದರಃ ಅಂಗರಾಗಃ, ಮುಕ್ತಾಮಾಲಾ ಚ, ಸ್ವಯಂ ಅತಿಲಲಿತಾ ಲಕ್ಷ್ಮೀ, ರಾಜನ್ ರತ್ನರಾಜಶ್ಚ,

ನಿಸ್ತಾಪಂ ನಿತ್ಯಭದ್ರಂ ಸ್ವರಸಸುರಭಿ ಚ ವರಗುಣಂ ಶ್ರೀಪತೇಃ ಬಾಹುಮಧ್ಯಂ ಲೋಕಪ್ರೇಕ್ಷಾಭಯಾದ್ವಾ, ಸ್ವಾತ್ಮಶೋಭೇಚ್ಛಯಾ ವಾ ಅವೃಣತ।

**ಅನ್ವಯಾರ್ಥ—** **ಚಂದನಾದ್ಯೈಃ** = ಗಂಧ ಮೊದಲಾದವುಗಳಿಂದ, (**ಕೃತಃ** = ಮಾಡಲ್ಪಟ್ಟ) , **ಪರಿಮಲಸುರಭಿಃ** = ಸುವಾಸನೆಯಿಂದ ಘಮಘಮಿಸುತ್ತಿರುವ, **ಸರ್ವಾಂಗೀಣಃ** = ಎಲ್ಲಾ ಅಂಗವನ್ನೂ ವ್ಯಾಪಿಸಿರುವ, **ಸುಂದರಃ** = ಸೊಗಸಾದ, **ಅಂಗರಾಗಃ** = ಲೇಪನದ್ರವ್ಯವು, **ಮುಕ್ತಾಮಾಲಾ ಚ** = ಮುತ್ತಿನಸರವು, **ಸ್ವಯಂ** = ಸ್ವಭಾವದಿಂದಲೇ, **ಅತಿಲಲಿತಾ** = ಅತ್ಯಂತಸುಂದರಿಯಾದ, **ಲಕ್ಷ್ಮೀಃ** = ಲಕ್ಷ್ಮೀದೇವಿಯು, **ರಾಜನ್** = ಶೋಭಿಸುತ್ತಿರುವ, **ರತ್ನರಾಜಶ್ಚ** = ರತ್ನಶ್ರೇಷ್ಠವಾದ ಕೌಸ್ತುಭವೂ, (**ಇತ್ಯೇತಾನಿ** = ಇವೆಲ್ಲವೂ) **ನಿಸ್ತಾಪಂ** = ತಾಪವಿಲ್ಲದಿರುವ, **ನಿತ್ಯಭದ್ರಂ** = ನಿತ್ಯ ಮಂಗಳಸ್ವರೂಪವಾದ, **ಸ್ವರಸಸುರಭಿ ಚ** = ಸ್ವಭಾವದಿಂದಲೇ ಸುವಾಸನೆಯಿಂದ ಕೂಡಿದ, **ವರಗುಣಂ** = ನಿತ್ಯಮಂಗಳಸ್ವರೂಪ ಮೊದಲಾದ ಗುಣಗಳಿಗಿಂತ ಬೇರೆಯಾದ ಶ್ರೇಷ್ಠಗುಣಗಳಿಂದ ಕೂಡಿದ, **ಶ್ರೀಪತೇಃ** = ಲಕ್ಷ್ಮೀಪತಿಯಾದ ನಾರಾಯಣನ, **ಬಾಹುಮಧ್ಯಂ** = ತೋಳುಗಳ ಮಧ್ಯವನ್ನು(ಎದೆಯನ್ನು) **ಲೋಕಪ್ರೇಕ್ಷಾಭಯಾದ್ ವಾ** = ಲೌಕಿಕಜನರ ನೋಟದಿಂದ (ಸೌಂದರ್ಯಹಾನಿಯಾದೀತು ) ಎಂಬ ಭಯದಿಂದಲೋ ಎಂಬಂತೆ, **ಸ್ವಾತ್ಮಶೋಭೇಚ್ಛಯಾ ವಾ** = ತಮ್ಮಿಂದ ಶೋಭೆಯು ಹೊಂದಲ್ಪಡಬೇಕು ಎಂಬ ಆಸೆಯಿಂದಲೋ ಎಂಬಂತೆ, **ಅವೃಣತ** = ಸ್ವೀಕರಿಸಿದುವು (ಆಶ್ರಯಿಸಿದುವು).

**ತಾತ್ಪರ್ಯ—** ಶ್ರೀಹರಿಯ ಎದೆಗೆ ಮುತ್ತಿನ ಹಾರದಿಂದ ಶೋಭೆಯುಂಟಾಗುತ್ತದೆ, ಎಂದು ಹೇಳಿದರೆ ಸ್ವತಃಶೋಭೆಯಿಲ್ಲ ಎಂದು ಅರ್ಥವಾಗುತ್ತದೆ. ಸ್ವಭಾವದಿಂದಲೇ ಶೋಭೆಯಿದ್ದರೆ ಮುತ್ತಿನ ಮಾಲೆಯನ್ನು ಧರಿಸುವುದು ವ್ಯರ್ಥವಾದೀತು ಎಂಬ ಭಾವನೆಗೆ ಉತ್ತರವನ್ನು ಹೇಳುತ್ತಾರೆ-

ಶ್ರೀಗಂಧಮುಂತಾದುವುಗಳಿಂದ ರಚಿತವಾಗಿರುವ, ಪರಮಳದಿಂದ ಘಮ ಘಮಿಸುತ್ತಿರುವ ಸರ್ವಾಂಗವ್ಯಾಪಿಯಾದ ಸುಂದರವಾದ ವಿಲೇಪನದ್ರವ್ಯವು ಶ್ರೀಹರಿಯ ಎದೆಯನ್ನು ಆಶ್ರಯಿಸಿದೆ. ಹಿಂದೆ ಹೇಳಿದ ಮುತ್ತಿನಸರವೂ ಶ್ರೀಹರಿಯ ಎದೆಯನ್ನು

ಅಪ್ಪಿಕೊಂಡಿದೆ. ಸ್ವಭಾವತಃ ಅತ್ಯಂತ ಸುಂದರಿಯಾದ ಶ್ರೀಲಕ್ಷ್ಮೀದೇವಿಯು ಶ್ರೀಹರಿಯ ಎಡದ ಎದೆಯನ್ನು ಆಲಿಂಗಿಸಿದ್ದಾಳೆ. ಪ್ರಕಾಶವನ್ನು ಬೀರುವ ಕೌಸ್ತುಭವೆಂಬ ರತ್ನರಾಜನು ಎದೆಯ ಮಧ್ಯವನ್ನು ಆಶ್ರಯಿಸಿದ್ದಾನೆ. ಪಾಪರಹಿತವಾದ, ನಿತ್ಯಮಂಗಳಸ್ವರೂಪವಾದ, ಸ್ವಭಾವದಿಂದ ಅತ್ಯಂತ ಸುವಾಸನೆಯಾದ, ಮತ್ತಿತರ ಅನೇಕ ಶ್ರೇಷ್ಠಗುಣಗಳಿಂದ ಕೂಡಿರುವ ಶ್ರೀಹರಿಯ ವಕ್ಷಃಸ್ಥಳಕ್ಕೆ ತಂಪಾದ ಶ್ರೀಗಂಧಲೇಪನದ ಆವಶ್ಯಕತೆಯಿಲ್ಲ. ನಿತ್ಯಮಂಗಳಸ್ವರೂಪವಾದ ಎದೆಗೆ ಮುತ್ತಿನಸರ, ಲಕ್ಷ್ಮೀ, ಕೌಸ್ತುಭಗಳ ಅಪೇಕ್ಷೆಯೂ ಇಲ್ಲ. ಆದರೂ ಈ ಸುಗಂಧದ್ರವ್ಯರಾಜನೇ ಮುಂತಾದವರು ಪ್ರಾಕೃತಜನರ ನೋಟದಿಂದ ತಮ್ಮ ಸೌಂದರ್ಯಾದಿಗುಣಗಳಿಗೆ ಹಾನಿಯುಂಟಾದೀತು ಎಂದೋ, ಉತ್ತಮಸ್ಥಳವನ್ನು ಆಶ್ರಯಿಸಿದ್ದರಿಂದ ನಮಗೆ ಇನ್ನೂ ಹೆಚ್ಚಿನ ಕಾಂತಿಯು ಬಂದೀತು ಎಂಬ ಆಸೆಯಿಂದಲೋ, ಸರ್ವಲೋಕವನ್ನು ಮೀರಿಸುವ ಸೌಂದರ್ಯವುಳ್ಳ ಶ್ರೀಹರಿಯ ಎದೆಯನ್ನು ಆಶ್ರಯಿಸಿದ್ದಾರೆ.

ಶ್ರೀಹರಿಯ ವಕ್ಷಃಸ್ಥಲವು ತಾಪರಹಿತವಾದ್ದರಿಂದ ತಾಪಪರಿಹಾರಕ್ಕಾಗಿ ಶ್ರೀಗಂಧಾದಿ-ಧಾರಣವು ಬೇಕಾಗಿಲ್ಲ. ಸ್ವತಃ ಸುವಾಸನೆಯಾಗಿರುವುದರಿಂದ, ಪರಿಮಳಕ್ಕಾಗಿಯೂ ಶ್ರೀಗಂಧಲೇಪವು ಬೇಕಾಗಿಲ್ಲ. ಸ್ವತಃ ಕೀರ್ತಿಮುಂತಾದ ಶ್ರೇಷ್ಠಗುಣಗಳಿಂದ ಕೂಡಿರು-ವುದರಿಂದ ಕೀರ್ತಿಗೋಸ್ಕರವೂ ಮುತ್ತಿನಸರ ಮುಂತಾದುವುಗಳನ್ನು ಧರಿಸಬೇಕಾಗಿಲ್ಲ. ಆದರೆ ಶ್ರೀಗಂಧಾದಿಗಳ ಪ್ರಯೋಜನಕ್ಕೋಸ್ಕರವೇ ಅವುಗಳು ಶ್ರೀಹರಿಯ ವಕ್ಷಃಸ್ಥಳವನ್ನು ಆಶ್ರಯಿಸಿವೆ. ಆದ್ದರಿಂದ ಪರಮಾತ್ಮನು ಅವುಗಳನ್ನು ಧರಿಸಿರುವುದು ವ್ಯರ್ಥವಲ್ಲ ಎಂದು ಭಾವ. ಸುಗಂಧರಾಜ ಮುಂತಾದುವುಗಳಿಗೆ ಪರಮಾತ್ಮನ ವಕ್ಷಃಸ್ಥಲವನ್ನು ಆಶ್ರಯಿಸಿ-ದ್ದರಿಂದ ಏನು ಪ್ರಯೋಜನ ಎಂದರೆ-ಆ ಅಂಗರಾಗ ಮುಂತಾದುವುಗಳು ಹೀಗೆ ಆಲೋಚಿಸಿದುವು. ಅತ್ಯಂತಸುಂದರರಾದ ನಾವು ಬೇರೆ ಎಲ್ಲಾದರೂ ಸೇರಿಕೊಂಡರೆ 'ಅಹಾ ನೋಡಿರಿ! ಈ ಸುಂದರವಾದ ಅಂಗರಾಗ, ಮುಕ್ತಾವಲಿ, ಲಕ್ಷ್ಮೀ, ಕೌಸ್ತುಭರು ಎಷ್ಟು ಸುಂದರರಾಗಿದ್ದಾರೆ? ನಮಗೂ ಇವೆಲ್ಲ ಇದ್ದಿದ್ದರೆ ಚೆನ್ನಾಗಿರುತ್ತಿತ್ತು!' ಎಂದು ಆಸೆಯಿಂದ ಸಾಧಾರಣ ಜನರೂ ನೋಡುವರು, ಆಗ ನಮ್ಮ ಸೌಂದರ್ಯಾದಿಗುಣಗಳಿಗೆ ಹಾನಿ-ಯುಂಟಾದೀತು. ಲೋಕದಲ್ಲಿ ಕೆಟ್ಟ ಕಣ್ಣಿನಿಂದ ಸುಂದರವಸ್ತುಗಳ ಗುಣಗಳು ಹಾಳಾಗು-ವುದು ಕಂಡಿದೆಯಲ್ಲವೇ? ನಾವು ಭಗವಂತನ ಎದೆಯನ್ನು ಆಶ್ರಯಿಸಿದರೆ ಪಾಮರರ

ಕೆಟ್ಟನೋಟ ಬೀಳಲಾರದು,ಬಿದ್ದರೂ ಶ್ರೀಹರಿಯ ವಕ್ಷಃಸ್ಥಲವೆಂಬ ಶ್ರೇಷ್ಠವಾದ ಆಧಾರದ ಮಹಿಮೆಯಿಂದ ನಮ್ಮ ಸೌಂದರ್ಯಾದಿಗುಣಗಳಿಗೆ ನ್ಯೂನತೆಯು ಬರಲಾರದು. ಅಥವಾ 'ತಾಪರಹಿತವಾದ, ಮಂಗಳಸ್ವರೂಪವಾದ, ಇನ್ನೂ ಅನೇಕಗುಣಭರಿತವಾದ ಶ್ರೀಹರಿಯ ವಕ್ಷಃಸ್ಥಲಕ್ಕೆ ಈ ಚಂದನಾದಿಗಳು ಏನು ಹೆಚ್ಚಳವನ್ನು ಉಂಟುಮಾಡಿಯಾವು? ಶ್ರೀಹರಿಯ ವಕ್ಷಃಸ್ಥಲವೇ ಸ್ವತಃ ಸುಂದರಗುಣಭರಿತವಾಗಿದೆ ಎಂದು ಅದರ ಮೇಲೆಯೇ ಲೋಕದ ದೃಷ್ಟಿಯು ಬಿದ್ದೀತು. ಜನರು ಸುಂದರಅತಿಸುಂದರಗಳಲ್ಲಿ ಅತಿಸುಂದರವನ್ನೇ ನೋಡು-ತ್ತಾರೆ. ಸುಂದರದ ಕಡೆಗೆ ಕಣ್ಣುಹಾಯಿಸುವುದಿಲ್ಲ. ಭಗವಂತನ ವಕ್ಷಃಸ್ಥಲವಾದರೋ ಮಹಾಮಹಿಮಾಭರಿತವಾಗಿರುವುದರಿಂದ ಪಾಮರರ ಕೆಟ್ಟನೋಟ ಬಿದ್ದರೂ ತನ್ನ ಸೌಂದರ್ಯಾದಿಗುಣಗಳಿಂದ ಹೀನವಾಗಲಾರದು ಎಂದು- ಆ ಅಂಗರಾಗವೆಂಬ ಸುಗಂಧದ್ರವ್ಯರಾಜ ಮುಂತಾದ ದೇವತೆಗಳು ಆಲೋಚಿಸಿ ತಮ್ಮ ಪ್ರಯೋಜನಕ್ಕಾಗಿಯೇ ಶ್ರೀಹರಿಯ ವಕ್ಷಃಸ್ಥಲವನ್ನು ಆಶ್ರಯಿಸಿದರು- ಎಂದು ತಾತ್ಪರ್ಯ. ಇಲ್ಲಿ ಅಂಗರಾಗ ಮುಕ್ತಾಹಾರ ಕೌಸ್ತುಭಮಣಿಗಳು ಅಚೇತನವಾದರೂ ಅವುಗಳ ಅಭಿಮಾನಿದೇವತೆಗಳು ಚೇತನರಾದ್ದರಿಂದ ಹೀಗೆ ಆಲೋಚಿಸಿದರು ಎಂದು ಹೇಳುವುದು ಸರಿಯಾಗಿಯೇ ಇದೆ. ವಸ್ತುಸ್ಥಿತಿಯಲ್ಲಿ ಪರಮಾತ್ಮನ ಅಲಂಕಾರಗಳು ಚೇತನರೂಪವಾಗಿಯೂ ಇವೆ. ಆದುದರಿಂದ ಆ ದೇವತೆಗಳು ಹೀಗೆ ವಿಚಾರಮಾಡಿದರು ಎಂಬ ಮಾತು ಯುಕ್ತವಾಗಿಯೇ ಇದೆ. ಶ್ರೀಹರಿಯ ಸ್ವರೂಪವೇ ಆಗಿರುವ ಅಲಂಕಾರಗಳು ಇರುವುದರಿಂದ ಅವುಗಳು ಎದೆಯನ್ನು ಆಶ್ರಯಿಸಿರುವುದನ್ನು ನೋಡಿ ಕವಿಗಳು ಲೋಕದ ಜನರ ಬುದ್ಧಿಗೆ ನಿಲುಕುವುದಕ್ಕಾಗಿ ಈ ರೀತಿ ಉತ್ಪ್ರೇಕ್ಷೆಮಾಡಿದ್ದಾರೆ ಎಂದೂ ಭಾವಿಸಬೇಕು. ಅತಿಶಯ-ಕಾಂತ್ಯಾದಿಗುಣಗಣಮಣಿಭರಿತವಾದ ಭಗವಂತನ ವಕ್ಷಃಸ್ಥಳವನ್ನು ಆಶ್ರಯಿಸಿದರೆ ನಮಗೂ ಅತಿಶಯವಾದ ಅಷ್ಟಿಷ್ಟು ಕಾಂತ್ಯಾದಿಗಳು ಬರುತ್ತವೆ ಎಂದು ಬಯಸಿ ತಮ್ಮ ಸ್ವಾರ್ಥಕ್ಕಾಗಿಯೇ ಈ ಆಭರಣ-ಗಂಧ-ಲಕ್ಷ್ಮಿಯರು ಆ ಸ್ಥಳವನ್ನು ಆಶ್ರಯಿಸಿದ್ದಾರೆ-ಎಂದೂ ತಾತ್ಪರ್ಯ ॥೨೧॥

**ದೀರ್ಘಾಃ ಪೀನಾಃ ಸುವೃತ್ತಾಃ ಮಹಿತಮಣಿಮಯೈರ್ಭೂಷಣೈರ್ಭಾಸುರಾ ಯೇ**

**ಲೋಕಾತೀತಾಸ್ತ್ರಿಲೋಕೀಪಿತುರತಿರುಚಿರಾಃ ಚಕ್ರಶಂಖಾದಿಚಿಹ್ನೈಃ।**

**ಆಕ್ರಾಂತಾಃ ಕಾಂತಿಮಂತಃ ಪ್ರಿಯತಮಕಮಲಾಭೋಗಭಾಜೋ ಭುಜಾಸ್ತೇ**

**ಭೂಮ್ನೋ ಭಕ್ತಾನ್ ವಿಭೂತಿಂ ಸ್ವಸದೃಶಮಭಯಾ ಭಾಜಯಂತೋ ಜಯಂತಿ ॥೨೨**

**ವ್ಯಾಖ್ಯಾನ– ಭುಜಾನ್ ಸ್ತೌತಿ–ದೀರ್ಘಾ ಇತಿ ॥** ದೀರ್ಘಾಃ, ಪೀನಾಃ ಪುಷ್ಟಾಃ, ಸುವೃತ್ತಾಃ ಸುಷ್ಠುವರ್ತುಲಾಃ, ಮಹಿತಮಣಿಮಯ್ಯೈಃ ಶ್ರೇಷ್ಠಮಣಿಖಚಿತೈಃ ಭೂಷಣೈಃ ಕೇಯೂರಾದ್ಯೈಃ ಅಲಂಕಾರೈಃ ಭಾಸುರಾಃ ದೀಪ್ಯಮಾನಾಃ ಲೋಕಾತೀತಾಃ ಲೋಕ–ವಿಲಕ್ಷಣಾಃ, ಅತಿರುಚಿರಾಃ ಅತ್ಯಂತಂ ಮನೋಹರಾಃ, ಚಕ್ರಶಂಖಾದಿಚಿಹ್ನೈಃ ಆಕ್ರಾಂತಾಃ ಯುಕ್ತಾಃ, ಕಾಂತಿಮಂತಃ, ಅಸಾಧಾರಣ್ಯೇನ ವ್ಯಪದೇಶಾ ಭವಂತಿ ಇತಿ–ನ್ಯಾಯಾತ್ ಬಹಳಕಾಂತ್ಯುಪೇತಾಃ, ಪ್ರಿಯತಮಕಮಲಾಭೋಗಭಾಜಃ ಅತಿಪ್ರಿಯ–ತಮಲಕ್ಷ್ಮ್ಯಾಃ ಆಶ್ಲೇಷರೂಪಂ ಭೋಗಂ ಭಜಂತೀತಿ ಭೋಗಭಾಜಃ, ಅಥವಾ ಕಮಲಾಯಾಃ ಭೋಗಂ ಸುಖಂ ಭಾಜಯಂತಿ ಪ್ರಾಪಯಂತೀತಿ ಭೋಗಭಾಜಃ, ಭಜ ಸೇವಾಯಾಂ ಇತ್ಯಸ್ಮಾತ್ ಅಂತರ್ಣೀತಣ್ಯರ್ಥಾತ್ 'ಭಜೋಣ್ವಿಃ' (೩–೨–೬೨) ಇತಿ–ಣ್ವಿಪ್ರತ್ಯಯಃ । ಭೋಗಸ್ತು ಭೋಜನೇ ವಿತ್ತೇ ನಿರ್ವೇಶೇ ಪಾಲನೇ ಸುಖೇ ಇತಿರತ್ನಮಾಲಾ, ತ್ರಿಲೋಕೀಪಿತುಃ ತ್ರೈಲೋಕ್ಯನಾಥಸ್ಯ, ಅಭಯಾಃ ಭಯರಹಿತಾಃ, ಭಕ್ತಾನ್ ಸ್ವಸದೃಶಂ ಸ್ವಯೋಗ್ಯತಾನುರೂಪಂ, ತ್ಯದಾದಿಷು ದೃಶೋಽನಾಲೋಚನೇ ಕಞ್ ಚ (೩–೨–೬೦) ಇತ್ಯತ್ರ ಸಮಾನಾನ್ಯಯೋಶ್ಚೇತಿ ವಕ್ತವ್ಯಂ ಇತಿ–ವಾರ್ತಿಕಾತ್ ಸಮಾನಶಬ್ದಸ್ಯ ಸಭಾವಃ । ವಿಭೂತಿಂ ಐಶ್ವರ್ಯಂ ಭಾಜಯಂತಃ ಭೂಮ್ನಃ ಪೂರ್ಣಸ್ಯ ತ್ರಿಲೋಕೀಪಿತುಃ ತ್ರೈಲೋಕ್ಯನಾಥಸ್ಯ ಹರೇಃ ತೇ ಭುಜಾಃ ಜಯಂತಿ, ಉತ್ಕೃಷ್ಟಾಃ ವರ್ತಂತೇ, ಜಯೇರ್ಜಯಾಭಿಭವಯೋರಿತ್ಯಾದಿಸ್ಮೃತೇಃ ಉತ್ಕರ್ಷಾರ್ಥಾತ್ ಜಿ–ಧಾತೋಃ ಕರ್ತರಿಲಟ್ ॥ ೨೨॥

**ಅನ್ವಯ–** ದೀರ್ಘಾಃ ಪೀನಾಃ ಸುವೃತ್ತಾಃ ಮಹಿತಮಣಿಮಯ್ಯೈಃ ಭೂಷಣೈಃ ಭಾಸುರಾಃ ಲೋಕಾತೀತಾ ಅತಿರುಚಿರಾಃ ಚಕ್ರಶಂಖಾದಿಚಿಹ್ನೈಃ ಆಕ್ರಾಂತಾಃ ಕಾಂತಿಮಂತಃ ಪ್ರಿಯತಮಕಮಲಾಭೋಗಭಾಜಃ ಅಭಯಾಃ ಭಕ್ತಾನ್ ಸ್ವಸದೃಶಂ ವಿಭೂತಿಂ ಭಾಜಯಂತಃ ಭೂಮ್ನಃ ತ್ರಿಲೋಕೀಪಿತುಃ ಯೇ ಭುಜಾಃ ತೇ ಜಯಂತಿ ।

**ಅನ್ವಯಾರ್ಥ–** ದೀರ್ಘಾಃ = ಉದ್ದವಾದ, ಪೀನಾಃ = ಪುಷ್ಟವಾದ, ಸುವೃತ್ತಾಃ = ಚೆನ್ನಾಗಿ ಗುಂಡಗೆ ಇರುವ, **ಮಹಿತಮಣಿಮಯ್ಯೈಃ** = ಶ್ರೇಷ್ಠವಾದ ಮಣಿಗಳಿಂದ ಖಚಿತವಾದ, **ಭೂಷಣೈಃ** = ತೋಳುಬಳೆ ಮುಂತಾದ ಅಲಂಕಾರಗಳಿಂದ, **ಭಾಸುರಾಃ** = ಪ್ರಕಾಶಮಾನವಾಗಿರುವ, **ಲೋಕಾತೀತಾಃ** = ಲೋಕವಿಲಕ್ಷಣವಾಗಿರುವ, **ಅತಿರುಚಿರಾಃ**

= ಅತ್ಯಂತಮನೋಹರವಾಗಿರುವ, **ಚಕ್ರಶಂಖಾದಿಚಿಹ್ನೈಃ** = ಸುದರ್ಶನಚಕ್ರ, ಪಾಂಚ-ಜನ್ಯಶಂಖ ಮುಂತಾದ ಗುರುತುಗಳಿಂದ, **ಆಕ್ರಾಂತಾಃ** = ಕೂಡಿರುವ, **ಕಾಂತಿಮಂತಃ** = ಬಹಳಕಾಂತಿಯಿಂದ ಕೂಡಿದ, **ಪ್ರಿಯತಮಕಮಲಾಭೋಗಭಾಜಃ** = ಅತ್ಯಂತ ಪ್ರೀತಿಪಾತ್ರಳಾದ ಲಕ್ಷ್ಮಿಯ ಆಲಿಂಗನ ರೂಪವಾದ ಆನಂದಾನುಭವವನ್ನು ಪಡೆಯುವ (ಅತಿಶಯಪ್ರೀತಿಗೆ ಪಾತ್ರಳಾದ ಲಕ್ಷ್ಮೀದೇವಿಗೆ ಸುಖವನ್ನುಂಟುಮಾಡುವ), **ಅಭಯಾಃ** = ಹೆದರಿಕೆ ಇಲ್ಲದ, **ಭಕ್ತಾನ್** = ಭಕ್ತರನ್ನು ಕುರಿತು, **ಸ್ವಸದೃಶಂ** = ಅವರ ಯೋಗ್ಯತಾ-ನುಸಾರವಾದ, **ವಿಭೂತಿಂ** = ಐಶ್ವರ್ಯವನ್ನು, **ಭಾಜಯಂತಃ** = ಹೊಂದಿಸುತ್ತಿರುವ, **ಭೂಮ್ನಃ** = ಪೂರ್ಣನಾದ, **ತ್ರಿಲೋಕೀಪಿತುಃ** = ಮೂರುಲೋಕಗಳಿಗೂ ತಂದೆಯಾದ ನಾರಾಯಣನ, **ಯೇ ಭುಜಾಃ** = ಯಾವ ಭುಜಗಳಿವೆಯೋ, **ತೇ** = ಅವುಗಳು, **ಜಯಂತಿ** = ಉತ್ಕೃಷ್ಟವಾಗಿವೆ.

**ತಾತ್ಪರ್ಯ–** ಶ್ರೀಮನ್ನಾರಾಯಣನ ತೋಳುಗಳು ಉದ್ದವಾಗಿ ಪುಷ್ಟವಾಗಿ ತುಂಬಾ ಗುಂಡಾಗಿಯೂ ಇವೆ. ಶ್ರೇಷ್ಠವಾದ ರತ್ನಗಳಿಂದ ಖಚಿತವಾದ ಅಂಗದಾದಿಅಲಂಕಾರ - ಗಳಿಂದ ಪ್ರಕಾಶಿಸುತ್ತಿವೆ. ಇವುಗಳು ಸಮಸ್ತಲೋಕ ವಿಲಕ್ಷಣವಾಗಿಯೂ, ಅತ್ಯಂತಸುಂದರ-ವಾಗಿಯೂ, ಭಯರಹಿತವಾಗಿಯೂ ಇವೆ. ಇವುಗಳಲ್ಲಿ ಸುದರ್ಶನಚಕ್ರ, ಪಾಂಚಜನ್ಯ-ಶಂಖ, ಕೌಮೋದಕೀಗದೆ, ನಂದಕವೆಂಬ ಖಡ್ಗ, ಶಾರ್ಙ್ಗವೆಂಬ ಬಿಲ್ಲು ಮುಂತಾದುವುಗಳ (ರೇಖಾರೂಪವಾದ) ಗುರುತುಗಳಿವೆ. ಬಹಳವಾದ ಕಾಂತಿಯಿಂದ ಕೂಡಿದ ಈ ಭುಜಗಳು ತಮಗೆ ಅತ್ಯಂತ ಪ್ರಿಯಳಾದ ಲಕ್ಷ್ಮೀದೇವಿಯ ಆಲಿಂಗನದ ಆನಂದವನ್ನು ಅನುಭವಿಸುತ್ತವೆ. (ಪ್ರಕಟಗೊಳಿಸುತ್ತವೆ) ಲಕ್ಷ್ಮೀದೇವಿಗೆ ಆನಂದವನ್ನು ಕೊಡುತ್ತವೆ. ಭಕ್ತರಿಗೆ ಅವರವರ ಯೋಗ್ಯತಾನುಸಾರವಾಗಿ ಸಂಪತ್ತನ್ನು ಕೊಡುತ್ತವೆ. ಈ ರೀತಿಯಿರುವ ಶ್ರೀಹರಿಯ ನಾಲ್ಕು ಬಾಹುಗಳೂ ಅತ್ಯಂತ ಉತ್ಕೃಷ್ಟವಾಗಿವೆ.

**ದಹ್ಯಾದಂಹಾಂಸ್ಯಸಹ್ಯಾನ್ಯುಪಹತಮಿಹಿರಪ್ರಗ್ರಹೋಗ್ರಾಂಶು ಚಕ್ರಂ**
**ದದ್ಯಾತ್ ಸದ್ಯಃ ಸುವಿದ್ಯಾಂ ವಿಧುಧವಲರುಚಿಃ ಪ್ರಾಂಚಿತಃ ಪಾಂಚಜನ್ಯಃ ।**
**ಹೃದ್ಯಾವಿದ್ಯಾ ವಿನುದ್ಯಾದ್ದಿತಿಸುತದಲನೀ ನೋ ಗದಾ ದುರ್ಮದಾರೇಃ**
**ಪದ್ಮಂ ಪದ್ಮಾಮುಖಶ್ರೀನಿಶಮನಮುಕುರಾಕಾರಿ ಕುರ್ಯಾತ್ ಸುಖಾನಿ ॥೨೩॥**

**ವ್ಯಾಖ್ಯಾನ—** ಚಕ್ರಾದ್ಯಾಯುಧಾನಿ ಸ್ತೌತಿ- **ದಹ್ಯಾದಿತಿ ॥** ಉಪಹತಮಿಹಿರ - ಪ್ರಗ್ರಹೋಗ್ರಾಂಶು, ಉಪಹತಾಃ ತಿರಸ್ಕೃತಾಃ ಮಿಹಿರಪ್ರಗ್ರಹಾಃ ಸೂರ್ಯರಶ್ಮಯಃ ಯೈಃ ತೇ, ವಿಕರ್ತನಾರ್ಕಮಾರ್ತಾಂಡಮಿಹಿರಾರುಣಪೂಷಣಃ ಇತ್ಯಮರಃ । ಪ್ರಗ್ರಹ ಇತ್ಯತ್ರ ರಶ್ಮೌ ಚ (೩-೩-೫೩)ಇತಿಸೂತ್ರೇಣ ರಶ್ಮೌ ವಾಚ್ಯೇ ಅಪ್, ತಾದೃಶಾಃ ಉಪಹತಮಿಹಿರಪ್ರಗ್ರಹಾಃ ಉಗ್ರಾಃ ಅಂಶವಃ ತೀಕ್ಷ್ಣಾಃ ಕಿರಣಾಃ ಯಸ್ಯ ತತ್, (ಮಿಹಿರಸ್ಯ ಪ್ರಗ್ರಹಾಃ ಮಿಹಿರಪ್ರಗ್ರಹಾಃ ಉಪಹತಾಃ ಮಿಹಿರಪ್ರಗ್ರಹಾಃ ಯೇನ ತತ್ ಉಪಹತ-ಮಿಹಿರಪ್ರಗ್ರಹಂ ಉಗ್ರಾಃ ಅಂಶವಃ ಯಸ್ಯ ತತ್ ಉಗ್ರಾಂಶು, ಉಪಹತಮಿಹಿರಪ್ರಗ್ರಹಂ ಚ ತತ್ ಉಗ್ರಾಂಶು ಚ ಇತಿ ವಾ ವಿಗ್ರಹಃ) ದುರ್ಮದಾರೇಃ (ದುರ್ಮದಾನಾಂ) ದುಷ್ಟಮದವತಾಂ ದೈತ್ಯಾನಾಂ ರಿಪೋಃ ಶ್ರೀವಿಷ್ಣೋಃ ಚಕ್ರಂ ಅಸಹ್ಯಾನಿ ಸೋಢು-ಮಶಕ್ಯಾನಿ ಅಂಹಾಂಸಿ ಪಾಪಾನಿ ದಹ್ಯಾತ್ । ಅಘಮಂಹಶ್ಚದುರಿತಂ ಪಾಪಂ ಪಾಪ್ಮಾ ಚ ಕಿಲ್ಬಿಷಂ, ಇತಿಧನಂಜಯಃ । ದಹ್ಯಾತ್ ದಹತು ದಹ ಭಸ್ಮೀಕರಣೇ ಇತ್ಯಸ್ಮಾತ್ ಕರ್ತರಿ ಲಿಙ್ । ವಿಧುಧವಲರುಚಿಃ ವಿಧುಶ್ಚಂದ್ರಃ ತದ್ವದ್ಧವಲಾ ಶುಭ್ರಾ ರುಚಿಃ ಕಾಂತಿರ್ಯಸ್ಯ ಸಃ, ಪ್ರಾಂಚಿತಃ ಪ್ರಕರ್ಷೇಣ ಪೂಜಿತಃ ಅಂಚು ಗತಿಪೂಜನಯೋರಿತಿಧಾತೋಃ, ದು-ರ್ಮದಾರೇಃ ಪಾಂಚಜನ್ಯಃ ತನ್ನಾಮಾ ಶಂಖಃ ಸದ್ಯಃ ಸುವಿದ್ಯಾಂ ದದ್ಯಾತ್, ಡುದಾಞ್ ದಾನೇ ಇತ್ಯಸ್ಮಾತ್ ಕರ್ತರಿ ಲಿಙ್ । ಹೃದ್ಯಾ ಮನೋಹರೀ ದಿತಿಸುತದಲನೀ ದಿತಿಸುತಾನ್ ದೈತ್ಯಾನ್ ದಲಯತಿ ಭಿನತ್ತಿ, (ದಿತಿಸುತಾಃ ದಲ್ಯಂತೇ ಭಿದ್ಯಂತೇ ಅನಯಾ ಇತಿ ದಲನೀ ಇತಿಕರಣೇ ವಾಲ್ಯುಟ್) ದುರ್ಮದಾರೇಃ ಗದಾ ನಃ ಅಸ್ಮಾಕಂ ಅವಿದ್ಯಾಃ ಅಜ್ಞಾನಾನಿ ವಿನುದ್ಯಾತ್ ಪರಿಹರತು (ಣುದ)ನುದ ಪ್ರೇರಣೇ ಇತ್ಯಸ್ಮಾತ್ ಕರ್ತರಿ ಲಿಙ್ । ಪದ್ಮಾಮುಖಶ್ರೀನಿಶಮನಮುಕುರಾಕಾರಿ ಪದ್ಮಾಮುಖಶ್ರಿಯಃ ಲಕ್ಷ್ಮೀಮುಖ-ಕಾಂತೇಃ ನಿಶಮನಾಯ ದರ್ಶನಾಯ ಮುಕುರವತ್ ಆದರ್ಶವತ್ ಆಕಾರಃ ಅಸ್ಯಾಸ್ತೀತಿ ಮುಕುರಾಕಾರಿ ದುರ್ಮದಾರೇಃ ಪದ್ಮಂ ನಃ ಅಸ್ಮಾಕಂ ಸುಖಾನಿ ಕುರ್ಯಾತ್ । ಡುಕೃಞ್ ಕರಣೇ ಇತ್ಯಸ್ಮಾತ್ ಕರ್ತರಿ ಲಿಙ್ ॥೨೩॥

**ಅನ್ವಯ—** ಉಪಹತಮಿಹಿರಪ್ರಗ್ರಹೋಗ್ರಾಂಶು ದುರ್ಮದಾರೇಃ (ವಿಷ್ಣೋಃ) ಚಕ್ರಂ ಅಸಹ್ಯಾನಿ ಅಂಹಾಂಸಿ ದಹ್ಯಾತ್ । ವಿಧುಧವಲರುಚಿಃ ಪ್ರಾಂಚಿತಃ (ದುರ್ಮದಾರೇಃ ) ಪಾಂಚಜನ್ಯಃ ಸದ್ಯಃ ಸುವಿದ್ಯಾಂ ದದ್ಯಾತ್ । ಹೃದ್ಯಾದಿತಿಸುತದಲನೀ (ದುರ್ಮದಾರೇಃ) ಗದಾ ನಃ ಅವಿದ್ಯಾಃ ವಿನುದ್ಯಾತ್ । ಪದ್ಮಾಮುಖಶ್ರೀನಿಶಮನಮುಕುರಾಕಾರಿ ಪದ್ಮಂ ನಃ ಸುಖಾನಿ ಕುರ್ಯಾತ್ ।

**ಅನ್ವಯಾರ್ಥ–** **ಉಪಹತಮಿಹಿರಪ್ರಗ್ರಹೋಗ್ರಾಂಶು, ಉಪಹತ** = ತಿರಸ್ಕರಿಸಲ್ಪಟ್ಟ, **ಮಿಹಿರ** = ಸೂರ್ಯನ, **ಪ್ರಗ್ರಹ** = ಕಿರಣಗಳುಳ್ಳ, **ಉಗ್ರ** = ತೀಕ್ಷ್ಣವಾದ, **ಅಂಶು** = ಕಿರಣಗಳುಳ್ಳ, **ದುರ್ಮದಾರೇಃ** = ದುಷ್ಟಮದಭರಿತರಾದವರ ಶತ್ರುವಾದ ಶ್ರೀವಿಷ್ಣುವಿನ, **ಚಕ್ರಂ** = ಸುದರ್ಶನಚಕ್ರವು, **ಅಸಹ್ಯಾನಿ** = ಸಹಿಸಲು ಸಾಧ್ಯವಿಲ್ಲದ, **ಅಂಹಾಂಸಿ** = ಪಾಪಗಳನ್ನು, **ದಹ್ಯಾತ್** = ಸುಟ್ಟುಹಾಕಲಿ, **ವಿಧುಧವಲರುಚಿಃ** = ಚಂದ್ರನಂತಹ ಶುಭ್ರವಾದ ಕಾಂತಿಯುಳ್ಳ, **ಪ್ರಾಂಚಿತಃ** = ಚೆನ್ನಾಗಿ ಪೂಜಿಸಲ್ಪಟ್ಟ, **ಪಾಂಚಜನ್ಯಃ** = ಪಾಂಚಜನ್ಯವೆಂಬ ಶಂಖವು, **ಸದ್ಯಃ** = ಕೂಡಲೇ, **ಸುವಿದ್ಯಾಂ** = ಉತ್ತಮ ಜ್ಞಾನವನ್ನು (ವಿದ್ಯೆಯನ್ನು ), **ದದ್ಯಾತ್** = ಕೊಡಲಿ. **ಹೃದ್ಯಾ** = ಮನೋಹರವಾದ, **ದಿತಿಸುತದಲನೀ** = ದೈತ್ಯರನ್ನು ಸಂಹರಿಸುವ, (ಶ್ರೀಹರಿಯ )**ಗದಾ** = ಕೌಮೋದಕೀ ಎಂಬ ಗದೆಯು, **ನಃ** = ನಮ್ಮ, **ಅವಿದ್ಯಾಃ** = ಅಜ್ಞಾನಗಳನ್ನು, **ವಿನುದ್ಯಾತ್** = ಪರಿಹರಿಸಲಿ, **ಪದ್ಮಾಮುಖಶ್ರೀನಿಶಮನಮುಕುರಾಕಾರಿ, ಪದ್ಮಾ** = ಲಕ್ಷ್ಮೀದೇವಿಯ, **ಮುಖಶ್ರೀ** = ಮುಖಕಾಂತಿಯ, **ನಿಶಮನ** = (ನೋಟಕ್ಕೆ) ನೋಡುವುದಕ್ಕೆ, **ಮುಕುರಾಕಾರಿ** = ಕನ್ನಡಿಯಂತಹ ಆಕಾರವುಳ್ಳ, (ಶ್ರೀಹರಿಯ) **ಪದ್ಮಂ** = ಪದ್ಮವು, **ನಃ** = ನಮಗೆ, **ಸುಖಾನಿ** = ಆನಂದಗಳನ್ನು, **ಕುರ್ಯಾತ್** = ಮಾಡಲಿ.

**ತಾತ್ಪರ್ಯ–** ಈ ಪದ್ಯದಿಂದ ಶ್ರೀಮನ್ಮಹಾವಿಷ್ಣುವಿನ ನಾಲ್ಕು ಭುಜಗಳಲ್ಲಿರುವ ಚಕ್ರಾದಿ ಆಯುಧಗಳನ್ನು ಸ್ತುತಿಸುತ್ತಾರೆ-ದುಷ್ಟಮದಭರಿತರಾದ ದೈತ್ಯರಿಗೆ ಶತ್ರುವಾದ ಶ್ರೀಹರಿಯ ಸುದರ್ಶನಚಕ್ರವು ಸೂರ್ಯನ ಕಿರಣಗಳನ್ನು ತಿರಸ್ಕರಿಸುವ ಉಗ್ರವಾದ ಕಿರಣಗಳಿಂದ ಪ್ರಕಾಶಮಾನವಾಗಿದೆ. ಅದು ನಮಗೆ ಸಹಿಸಲಸಾಧ್ಯವಾದ ಪಾಪಗಳನ್ನು ಸುಟ್ಟುಹಾಕಲಿ. ಶ್ರೀಮನ್ನಾರಾಯಣನ ಪಾಂಚಜನ್ಯವೆಂಬ ಶಂಖವು ಚಂದ್ರನಂತೆ ಶುಭ್ರವಾದ ಕಾಂತಿಯಿಂದ ಕೂಡಿದೆ. ಅದು ಭಕ್ತರಿಂದ ಅತಿಶಯವಾದ ಪೂಜೆಯನ್ನೂ ಪಡೆದಿದೆ. ಅಂತಹ ಶಂಖವು ಕೂಡಲೇ ನಮಗೆ ಒಳ್ಳೆಯ ಜ್ಞಾನವನ್ನು ಕೊಡಲಿ. ದೈತ್ಯರನ್ನು ಸಂಹರಿಸುವ ಮನೋಹರವಾದ ಕೌಮೋದಕೀ ಎಂಬ ಗದೆಯು ನಮ್ಮ ಅಜ್ಞಾನಗಳನ್ನು ಪರಿಹರಿಸಲಿ. ತನ್ನ ಮುಖವನ್ನು ನೋಡಿಕೊಳ್ಳಲು ಶ್ರೀಲಕ್ಷ್ಮೀದೇವಿಗೆ ಕನ್ನಡಿಯಂತಿರುವ ಪದ್ಮವು ನಮಗೆ ಆನಂದಪರಂಪರೆಯನ್ನುಂಟು ಮಾಡಲಿ ಎಂದು ಚಕ್ರಶಂಖಗದಾಪದ್ಮಗಳನ್ನು ಪ್ರಾರ್ಥಿಸಿದ್ದಾರೆ.

**ಉನ್ನಮ್ರಸ್ಕಂಧಪರ್ಯಾಕಲನಪರಿಲಸಚ್ಛಶ್ವದಮ್ಲಾನಮಾಲಾ-**
**ವ್ಯಾಲೋಲದ್ದಿವ್ಯದೀವ್ಯನ್ಮಧುಕರನಿಕರಾನೂಕ್ತಿಕೋಲಾಹಲೋ ನಃ।**
**ದೂರೀಕುರ್ಯಾದವಿದ್ಯಾಕೃತಮತಿವಿಕೃತಂ ಭೂಷಿತಾಕಲ್ಪಜಾತ-**
**ಶ್ರೀಬಾಹ್ವಾಶ್ಲೇಷವೇಷಾಚ್ಯುತಗಲಗಲಿತೋ ವೇದನಾದೋ ಗಭೀರಃ ॥೨೪॥**

**ವ್ಯಾಖ್ಯಾನ–** ಶ್ರೀವಿಷ್ಣುನಾ ಕ್ರಿಯಾಮಾಣಂ ವೇದನಾದಂ ಸ್ತೌತಿ–**ಉನ್ನಮ್ರೇತಿ** ॥ ಉನ್ನಮ್ರಯೋಃ (ಉನ್ನತಯೋಃ) ಸ್ಕಂಧಯೋಃ ಅಂಸಯೋಃ ಪರ್ಯಾಕಲನೇನ ಪರಿತಃ ಆಕಲನೇನ ಬಂಧನೇನ ಪರಿಲಸಂತೀ ದೀಪ್ಯಮಾನಾ ಶಶ್ವತ್ ನಿರಂತರಂ ಆಮ್ಲಾನಾ ಯಾ ಮಾಲಾ ತಸ್ಯಾಂ ವ್ಯಾಲೋಲಂತಃ ಸಂಚಲಂತಃ ಲುಲ ಇತಿ ಸೌತ್ರೋ ಧಾತುಃ ಪ್ರಯೋಗವಶಾತ್ ಚಲನೇ ವರ್ತತೇ, ದಿವ್ಯಾಃ ಅದ್ಭುತಕಾಂತಿಮಂತಃ ದೀವ್ಯಂತಃ ಕ್ರೀಡಂತಃ ಯೇ ಮಧುಕರಾಃ ಭ್ರಮರಾಃ ತೇಷಾಂ ನಿಕರಃ ಸಮೂಹಃ ತಸ್ಯ ಅನುಕ್ತ್ಯಾ ಅನುಸಾರಿವಚನೇನ, ಕೋಲಾಹಲಃ ಕಲಕಲಧ್ವನಿರೂಪಃ (ಯಸ್ಮಿನ್ ಸಃ ತಾದೃಶಃ) ಭೂಷಿತಾನಿ ಸ್ವಕಾಂತ್ಯಾ ಶೋಭಿತಾನಿ ಆಕಲ್ಪಜಾತಾನಿ ಅಲಂಕಾರಸಮುದಾಯಃ ಯಾಭ್ಯಾಂ ತಾಭ್ಯಾಂ ಶ್ರೀಬಾಹುಭ್ಯಾಂ ಲಕ್ಷ್ಮೀಭುಜಾಭ್ಯಾಂ ಆಶ್ಲೇಷಃ ಆಲಿಂಗನಂ ವೇಷಃ ಅಲಂಕಾರಃ ಯಸ್ಯ ತಸ್ಮಾತ್ ಅಚ್ಯುತಗಲಾತ್ ಶ್ರೀವಿಷ್ಣುಕಂಠಾತ್ ಗಲಿತಃ ನಿಸ್ಸೃತಃ ಗಭೀರಃ ವೇದನಾದಃ ವೇದಧ್ವನಿಃ ಅವಿದ್ಯಾಕೃತಂ ಅತಿವಿಕೃತಂ ಅಜ್ಞಾನಕೃತಂ ಬಂಧವಿಕಾರಂ ದೂರೀಕುರ್ಯಾತ್ ದೂರಂ ಕರೋತು ॥೨೪॥

**ಅನ್ವಯ–** ಉನ್ನಮ್ರಸ್ಕಂಧಪರ್ಯಾಕಲನಪರಿಲಸಚ್ಛಶ್ವದಮ್ಲಾನಮಾಲಾವ್ಯಾಲೋಲ-ದ್ದಿವ್ಯದೀವ್ಯನ್ಮಧುಕರನಿಕರಾನೂಕ್ತಿಕೋಲಾಹಲಃ ಭೂಷಿತಾಕಲ್ಪಜಾತಶ್ರೀಬಾಹ್ವಾಶ್ಲೇಷ-ವೇಷಾಚ್ಯುತಗಲಗಲಿತಃ ಗಭೀರಃ ವೇದನಾದಃ ನಃ ಅವಿದ್ಯಾಕೃತಂ ಅತಿವಿಕೃತಂ ದೂರೀ-ಕುರ್ಯಾತ್ ।

**ಅನ್ವಯಾರ್ಥ–** ಉನ್ನಮ್ರ....ಕೋಲಾಹಲಃ, ಉನ್ನಮ್ರ = ಎತ್ತರವಾದ, ಸ್ಕಂಧ = ಹೆಗಲುಗಳಲ್ಲಿ, ಪರ್ಯಾಕಲನ = ಸುತ್ತುಹಾಕಿರುವುದರಿಂದ, ಪರಿಲಸತ್ = ಶೋಭಿಸು-ತ್ತಿರುವ, ಶಶ್ವತ್ = ಯಾವಾಗಲೂ, ಅಮ್ಲಾನ = ಬಾಡದೇ ಇರುವ, ಮಾಲಾ = ವನ-ಮಾಲೆಯೆಂಬ ಹೂವಿನ ಸರದಲ್ಲಿ, ವ್ಯಾಲೋಲತ್ = ಇತ್ತ ಅತ್ತ ಓಡಾಡುತ್ತಿರುವ, ದಿವ್ಯ

= ಅದ್ಭುತಕಾಂತಿಯುಳ್ಳ, (ಅಲೌಕಿಕವಾದ) **ದೀವ್ಯತ್** = ವಿಹರಿಸುತ್ತಿರುವ, **ಮಧುಕರ** = ದುಂಬಿಗಳ, **ನಿಕರ** = ಸಮೂಹದ, **ಅನೂಕ್ತಿ** = ವೇದನಾದಪ್ರತಿಧ್ವನಿರೂಪವಾದ ವಚನದಿಂದ, **ಕೋಲಾಹಲಃ** = ಕಲಕಲಧ್ವನಿಯಿಂದಕೂಡಿರುವ, **ಭೂಷಿತಾಕಲ್ಪಜಾತ** = ಅಲಂಕರಿಸಲ್ಪಟ್ಟ ಆಭರಣಗಳ ಸಮುದಾಯವುಳ್ಳ, **ಶ್ರೀ** = ಲಕ್ಷ್ಮೀದೇವಿಯ, **ಬಾಹು** = ತೋಳುಗಳ, **ಆಶ್ಲೇಷ** = ಆಲಿಂಗನವೆಂಬ, **ವೇಷ** = ಅಲಂಕಾರವುಳ್ಳ, **ಅಚ್ಯುತ** = ಶ್ರೀಹರಿಯ, **ಗಲ** = ಕಂಠದಿಂದ, **ಗಲಿತಃ** = ಅನಾಯಾಸವಾಗಿ ಹೊರಗೆ ಆವಿರ್ಭವಿಸಿರುವ, **ಗಭೀರಃ** = ಗಂಭೀರವಾದ, **ವೇದನಾದಃ** = ವೇದಧ್ವನಿಯು, **ನಃ** = ನಮ್ಮ, **ಅವಿದ್ಯಾಕೃತಂ** = ಅಜ್ಞಾನದಿಂದ ಉಂಟುಮಾಡಲ್ಪಟ್ಟ, **ಅತಿವಿಕೃತಂ** = ಸಂಸಾರಬಂಧರೂಪವಾದ ವಿಕಾರವನ್ನು, **ದೂರೀಕುರ್ಯಾತ್** = ದೂರಮಾಡಲಿ (ಹೋಗಲಾಡಿಸಲಿ).

**ತಾತ್ಪರ್ಯ**– ಈ ಪದ್ಯದಿಂದ ಶ್ರೀಹರಿಯು ನಿರಂತರವಾಗಿ ಮಾಡುತ್ತಿರುವ ವೇದಪಾರಾಯಣಧ್ವನಿಯನ್ನು ವರ್ಣಿಸುತ್ತಿದ್ದಾರೆ- ಶ್ರೀಹರಿಯ ಎತ್ತರವಾದ ಎರಡು ಹೆಗಲುಗಳನ್ನೂ ಸುತ್ತಿ ವನಮಾಲೆಯೆಂಬ ಪುಷ್ಪಸರವು ಶೋಭಿಸುತ್ತಿದೆ. ಅದು ಎಂದೂ ಬಾಡುವುದಿಲ್ಲ. ಮಕರಂದ ಮತ್ತು ಸುವಾಸನೆಗಳಿಂದ ಪೂರ್ಣವಾಗಿರುತ್ತದೆ. ಅಲ್ಲಿ ಕಾಂತಿಪೂರ್ಣವಾದ ಅಲೌಕಿಕವಾದ ದುಂಬಿಗಳು ಇತ್ತ ಅತ್ತ ಸಂಚರಿಸುತ್ತಾ ವಿಹಾರಮಾಡುತ್ತಾ ಗುಂಯ್ ಎಂಬ ಸದ್ದುಮಾಡುತ್ತಿರುತ್ತವೆ. ಅವುಗಳ ಗುಂಜಾರವವು ಶ್ರೀಹರಿಯ ವೇದೋಚ್ಚಾರಣೆಯ ಪ್ರತಿಧ್ವನಿಯಂತೆ ಕೇಳಿಸುತ್ತಿರುತ್ತದೆ. ಶ್ರೀಹರಿಯ ವೇದೋಚ್ಚಾರಣನಾದವು ಹೀಗಿದೆ. ಲಕ್ಷ್ಮೀದೇವಿಯು ಅಲಂಕೃತವಾದ ತನ್ನೆರಡೂ ಕೈಗಳಿಂದ ಶ್ರೀಹರಿಯ ಕಂಠವನ್ನು ಆಲಿಂಗಿಸಿ, ಆ ಕಂಠದಲ್ಲಿ ಅಪೂರ್ವವಾದ ಶೋಭೆಯು ಅಭಿವ್ಯಕ್ತವಾಗುವಂತೆ ಮಾಡಿದ್ದಾಳೆ. ಇಂತಹ ಕಂಠದಿಂದ ಅನಾಯಾಸವಾಗಿ ಅನಂತ ವೇದಗಳು ಗಂಭೀರನಾದದಿಂದ ಹೊರಹೊಮ್ಮುತ್ತಿವೆ. ಇಂತಹ ವೇದನಾದವು ಅಜ್ಞಾನದಿಂದುಂಟಾದ ನಮ್ಮ ಸಂಸಾರಬಂಧವನ್ನು ಹೋಗಲಾಡಿಸಲಿ ಎಂದು ಪ್ರಾರ್ಥಿಸಿದ್ದಾರೆ.

**ಪೂರ್ಣಾನಂತಾಮಲೇಂದುಪ್ರಕರಮತಿಶಯಾನಸ್ಯ ಕಾಂತ್ಯಾ ಮುಖೇಂದೋಃ**
**ಸೌಭಾಗ್ಯಂ ಭಾಗ್ಯದೇವ್ಯಾಃ ಸ್ವಭಿಮತಕಮಿತುರ್ವರ್ಣ್ಯತೇ ಕಿಂ ವಿವಿಚ್ಯ ।**

**ಯತ್ಸಂಸ್ಮೃತ್ಯೈವ ತಾಪಾನ್ ಪ್ರಜಹತಿ ಜನತಾ ಯತ್ರ ಸಂಗಾದಸಂಗೇ**
**ಮಾಂಗಲ್ಯಾಂಗ್ಯಾ ಮನೋಜ್ಞಂ ಮುಖಕಮಲಮಭೂನ್ಮಂಗಲೈಕಪ್ರಸೂತಿಃ ॥೨೫॥**

**ವ್ಯಾಖ್ಯಾನ–** ಮುಖಂ ಸ್ತೌತಿ ಶ್ಲೋಕದ್ವಯೇನ– **ಪೂರ್ಣಾನಂತೇತಿ ॥** ಯತ್ ಯಸ್ಯ ಮುಖೇಂದೋಃ ಸಂಸ್ಮೃತ್ಯೈವ ಸ್ಮರಣಮಾತ್ರೇಣ, ಜನತಾಃ ಜನಸಮೂಹಾಃ ಗ್ರಾಮ–ಜನಬಂಧುಭ್ಯಸ್ತಲ್ (೪–೨–೪೩) ಇತಿ ಸಮೂಹಾರ್ಥೇ ತಲ್‌ಪ್ರತ್ಯಯಃ, ತಾಪಾನ್ ಆಧ್ಯಾತ್ಮಿಕಾದಿದೈವಿಕಾದಿಭೌತಿಕಾನ್ ತ್ರಿವಿಧಾನ್ ಸಂತಾಪಾನ್ ಪ್ರಜಹತಿ ಪ್ರಕರ್ಷೇಣ ತ್ಯಜಂತಿ, ಓಹಾಕ್ ತ್ಯಾಗೇ ಇತ್ಯಸ್ಮಾದ್ ಧಾತೋಃ ಕರ್ತರಿ ಲಟ್ । ಅಸಂಗೇ ಪಾಪಾದಿ–ಲೇಪರಹಿತೇ ಯತ್ರ ಯಸ್ಮಿನ್ ಮುಖೇಂದೌ ಸಂಗಾತ್ ಈಕ್ಷಣಾದಿನಾ ಆಸಕ್ತೇಃ ಮಾಂಗಲ್ಯಾಂಗ್ಯಾಃ ಮಾಂಗಲ್ಯಾನಿ ಮಂಗಲದಾನಿ ಅಂಗಾನಿ ಯಸ್ಯಾಃ ಸಾ ತಸ್ಯಾಃ ಮಹಾಲಕ್ಷ್ಮ್ಯಾಃ ಮನೋಜ್ಞಂ ಮನೋಹರಂ ಮುಖಕಮಲಂ ಮಂಗಲೈಕಪ್ರಸೂತಿಃ ಮಂಗಲಸ್ಯ ಏಕಸ್ಯೈವ, ನತ್ವಮಂಗಲಸ್ಯೇತ್ಯರ್ಥಃ, ಪ್ರಸೂತಿಃ ಪ್ರಸವೋ ಯಸ್ಮಾತ್, ತಾದೃಶಂ ಅಭೂತ್ ಆಸೀತ್, ಕಾಂತ್ಯಾ ಸ್ವಕಾಂತ್ಯಾ ಪೂರ್ಣಾನಾಂ ಅಪರಿಮಿತಾನಾಂ ಅನಂತ ಅಸಂಖ್ಯಾನಾಂ ಅಮಲಾನಾಂ ಕಲಂಕರಹಿತಾನಾಂ ಇಂದೂನಾಂ ಚಂದ್ರಾಣಾಂ ಪ್ರಕರಂ ಸಮೂಹಂ, ಅತಿಶಯಾನಸ್ಯ ಅತಿಶೇತೇ ಇತ್ಯತಿಶಯಾನಃ ತಸ್ಯ (ಅತಿಕ್ರಾಂತಸ್ಯ) ಅತಿಕ್ರಮ್ಯ ವರ್ತಮಾನಸ್ಯ, ಅತಿಪೂರ್ವಾತ್ ಶೀಙ್ ಸ್ವಪ್ನೇ ಇತ್ಯಸ್ಮಾತ್ ಲಟಃ ಶಾನಚ್, ಭಾಗ್ಯದೇವ್ಯಾಃ ಭಾಗ್ಯಪ್ರದದೇವ್ಯಾಃ ಮಹಾಲಕ್ಷ್ಮ್ಯಾಃ ಸ್ವಭಿಮತಕಮಿತುಃ ಸುಷ್ಠು ಅಭಿಮತಕಾಂತಸ್ಯ ಶ್ರೀವಿಷ್ಣೋಃ ಮುಖೇಂದೋಃ ಮುಖಚಂದ್ರಸ್ಯ ಸೌಭಾಗ್ಯಂ ಸುಭಗತ್ವಂ ಸೌಂದರ್ಯಮಿತಿ ಯಾವತ್ ವಿವಿಚ್ಯ ಏತಾದೃಶಂ ಇತಿವಿವೇಕೇನ ನಿರೂಪ್ಯ ವರ್ಣ್ಯತೇ ಕಿಂ? ನೈವ ವರ್ಣ್ಯತೇ ಇತ್ಯರ್ಥಃ ॥೨೫॥

**ಅನ್ವಯ:–** ಯತ್ಸಂಸ್ಮೃತ್ಯೈವ ಜನತಾಃ ತಾಪಾನ್ ಪ್ರಜಹತಿ, ಅಸಂಗೇ ಯತ್ರ–ಸಂಗಾತ್ ಮಾಂಗಲ್ಯಾಂಗ್ಯಾಃ ಮನೋಜ್ಞಂ ಮುಖಕಮಲಂ ಮಂಗಲೈಕಪ್ರಸೂತಿಃ ಅಭೂತ್, ಕಾಂತ್ಯಾ ಪೂರ್ಣಾನಂತಾಮಲೇಂದುಪ್ರಕರಂ ಅತಿಶಯಾನಸ್ಯ ಭಾಗ್ಯದೇವ್ಯಾಃ ಸ್ವಭಿಮತಕಮಿತುಃ ಮುಖೇಂದೋಃ ಸೌಭಾಗ್ಯಂ ವಿವಿಚ್ಯ ವರ್ಣ್ಯತೇ ಕಿಂ ?

**ಅನ್ವಯಾರ್ಥ–** ಯತ್ = ಯಾವ ಮುಖಚಂದ್ರನ, ಸಂಸ್ಮೃತ್ಯಾ ಏವ = ಸ್ಮರಣೆ-

ಯಿಂದಲೇ, **ಜನತಾಃ** = ಜನರಸಮೂಹಗಳು, **ತಾಪಾನ್** = ಆಧ್ಯಾತ್ಮಿಕ ಆದಿದೈವಿಕ, ಆದಿಭೌತಿಕ ಎಂಬ ಮೂರುವಿಧವಾದ ತಾಪಗಳನ್ನು, **ಪ್ರಜಹತಿ** = ಬಿಡುತ್ತವೆಯೋ, **ಅಸಂಗೇ** = ಪಾಪಾದಿಲೇಪರಹಿತವಾದ, **ಯತ್ರ** = ಶ್ರೀಹರಿಯ ಯಾವ ಮುಖಚಂದ್ರನಲ್ಲಿ, **ಸಂಗಾತ್**= ನೋಡುವುದೇ ಮೊದಲಾದ ಆಸಕ್ತಿಯಿಂದ, **ಮಾಂಗಲ್ಯಾಂಗ್ಯಾಃ**= ಮಂಗಲ-ಪ್ರದವಾದ ಅಂಗಗಳುಳ್ಳ ಮಹಾಲಕ್ಷ್ಮೀದೇವಿಯ, **ಮನೋಜ್ಞಂ** = ಮನೋಹರವಾದ, **ಮುಖಕಮಲಂ** = ಮುಖವೆಂಬ ಕಮಲವು, **ಮಂಗಲೈಕಪ್ರಸೂತಿಃ** = ಕೇವಲಮಂಗಲಗಳ ಉತ್ಪತ್ತಿಗೆ ಕಾರಣವಾಗಿ, **ಅಭೂತ್**= ಆಯಿತೋ, **ಕಾಂತ್ಯಾ**= ಕಾಂತಿಯಿಂದ, **ಪೂರ್ಣಾ-ನಂತಾಮಲೇಂದುಪ್ರಕರಂ**, **ಪೂರ್ಣ** = ಎಲ್ಲಾ ಕಲೆಗಳಿಂದ ತುಂಬಿದ, **ಅನಂತ** = ಸಂಖ್ಯೆಯಿಲ್ಲದ, **ಅಮಲ** = ಕಲಂಕರಹಿತವಾದ, **ಇಂದು** = ಚಂದ್ರರ, **ಪ್ರಕರಂ** = ಸಮೂಹವನ್ನು, **ಅತಿಶಯಾನಸ್ಯ** = ಮೀರಿಸಿರುವ, **ಭಾಗ್ಯದೇವ್ಯಾಃ** = ಸೌಭಾಗ್ಯದೇವತೆ-ಯಾದ ಲಕ್ಷ್ಮೀದೇವಿಯ, **ಸ್ವಭಿಮತಕಮಿತುಃ** = ಅತ್ಯಂತಪ್ರೀತಿಪಾತ್ರವಲ್ಲಭನಾದ ಶ್ರೀಹರಿಯ, **ಮುಖೇಂದೋಃ**= ಮುಖವೆಂಬ ಚಂದ್ರನ, **ಸೌಭಾಗ್ಯಂ** = ಸೌಂದರ್ಯವು, **ವಿವಿಚ್ಯ** = ಇದು ಹೀಗೆಯೇ ಇರತಕ್ಕದ್ದು ಎಂದು ಪ್ರತ್ಯೇಕವಾಗಿ ನಿರ್ಧರಿಸಿ, **ವರ್ಣ್ಯತೇ ಕಿಂ** = ವರ್ಣಿಸಲ್ಪಡುತ್ತದೆಯೇನು ?

**ತಾತ್ಪರ್ಯ**– ಶ್ರೀಮನ್ಮಹಾವಿಷ್ಣುವಿನ ಮುಖಚಂದ್ರನ ಸ್ಮರಣೆಯಿಂದಲೇ ಅಸಂಖ್ಯ-ರಾದ ಸಾತ್ವಿಕಜನಕೋಟಿಯು, ಆಧ್ಯಾತ್ಮಿಕಾದಿಮೂರುವಿಧಸಂತಾಪವನ್ನೂ ಕಳೆದು-ಕೊಳ್ಳುತ್ತದೆ. ಸಮಸ್ತದೋಷದೂರವಾದ ಈ ಮುಖಚಂದ್ರನನ್ನು ನೋಡುತ್ತಾ ಆನಂದಿ-ಸುತ್ತಾ ಇರುವುದರಿಂದಲೇ ಮಾಂಗಲ್ಯದೇವತೆಯಾದ ಮಹಾಲಕ್ಷ್ಮೀದೇವಿಯ ಮುಖ-ಕಮಲವು ಭಕ್ತರಿಗೆ ಕೇವಲಮಂಗಳಗಳನ್ನೇ ಕೊಡುವ ಸಾಮರ್ಥ್ಯವನ್ನು ಪಡೆದಿದೆ. ಶ್ರೀಹರಿಯ ಮುಖಚಂದ್ರನು ಕಾಂತಿಯಿಂದ, ಷೋಡಶಕಲಾಪರಿಪೂರ್ಣರಾದ, ಅನಂತ-ರಾದ ಕಲಂಕರಹಿತರಾದ ಚಂದ್ರರರಾಶಿಯನ್ನೂ ಮೀರಿಸುತ್ತಾನೆ. ಸೌಭಾಗ್ಯದೇವತೆಯೆಂದು ಪ್ರಸಿದ್ಧಳಾದ ಲಕ್ಷ್ಮೀದೇವಿಯ ಹೃದಯವಲ್ಲಭನಾದ ಶ್ರೀಹರಿಯ ಇಂತಹ ಮುಖಚಂದ್ರನ ಸೌಂದರ್ಯವನ್ನು- ಇದು ಹೀಗೆಯೇ ಇದೆಯೆಂದು ಪ್ರತ್ಯೇಕವಾಗಿ ವರ್ಣಿಸಲು ಸಾಧ್ಯ-ವಿದೆಯೇ? ಯಾರಿಗೂ ಸಾಧ್ಯವಿಲ್ಲ.

**ವಿಶೇಷಾಂಶ:-** ಲೋಕದಲ್ಲಿ ಕವಿಗಳ ಸಂಪ್ರದಾಯದಂತೆ ಚಂದ್ರ ಮತ್ತು ಕಮಲಗಳಿಗೆ ಪರಸ್ಪರ ವಿರೋಧವಿದೆ. ಚಂದ್ರೋದಯವಾದಾಗ ಕಮಲವು ಸಂಕೋಚ ಹೊಂದುತ್ತದೆ. ಆದರೆ ಭಗವಂತನ ಮುಖಚಂದ್ರನ ಸಂಪರ್ಕದಿಂದ ಭಾಗ್ಯಲಕ್ಷ್ಮಿಯ ಮುಖಕಮಲವು ಅರಳಿ ಜನರಿಗೆ ಸಕಲಸನ್ಮಂಗಳಗಳನ್ನು ಕರುಣಿಸುತ್ತದೆ. ಇದು ಅಲೌಕಿಕದಿವ್ಯಮಹಿಮೆಯು ಎಂದು ಸೂಚಿಸಿದ್ದಾರೆ.

**ವಂದೇ ವಿಷ್ಣೋರ್ಮುಖಾಬ್ಜಂ ಮಣಿಮಕರಚಲತ್ಕುಂಡಲೋಲ್ಲಾಸಿಗಂಡಂ**
**ಚಾರುಭ್ರೂನ್ನಮ್ರನಾಸಂ ಸರಸಿಜನಯನಂ ತಾಮ್ರಕಮ್ರಾಧರೋಷ್ಠಮ್ ।**
**ಉನ್ಮೀಲತ್ಕುಂದವೃಂದದ್ಯುತಿಮತಿಶಯತಶ್ಚೋಲ್ಲಸಂತ್ಯಾ ಹಸಂತ್ಯಾ**
**ಮಜ್ಜಂತ್ಯಾ ಚಾಧರೋಷ್ಠಾರುಣಿಮನಿರುಚಿರಂ ದಂತಪಂಕ್ತ್ಯಂತಕಾಂತ್ಯಾ ॥೨೬॥**

**ವ್ಯಾಖ್ಯಾನ:-** ವಂದೇ ವಿಷ್ಣೋರಿತಿ- ಮಣಿಮಕರಚಲತ್ಕುಂಡಲೋಲ್ಲಾಸಿಗಂಡಂ, ಮಣಿಖಚಿತಾಭ್ಯಾಂ ಮಕರಲಕ್ಷಣಾಭ್ಯಾಂ ಚಲದ್ಭ್ಯಾಂ ಕುಂಡಲಾಭ್ಯಾಂ ಉಲ್ಲಾಸಿನೌ ಅತಿಪ್ರಕಾಶಮಾನೌ ಗಂಡೌ ಕಪೋಲೌ ಯಸ್ಯ ತತ್, ಚಾರುಭ್ರು ಚಾರೂ ಮನೋಹರೇ ಭ್ರುವೌ ಯಸ್ಯ ತತ್, ಉನ್ನಮ್ರನಾಸಂ ಉನ್ನತನಾಸಿಕಂ, ಸರಸಿಜನಯನಂ ಸರಸಿಜವತ್ ಕಮಲವತ್ ನಯನೇ ಯಸ್ಯ ತತ್ ತಾದೃಶಂ, ತಾಮ್ರಕಮ್ರಾಧರೋಷ್ಠಂ, ತಾಮ್ರಃ ಅರುಣಃ ಕಮ್ರಃ ಕಮನೀಯಃ ಅಧರೋಷ್ಠಃ ಯಸ್ಯ ತತ್, ಉನ್ಮೀಲತ್ಕುಂದವೃಂದ-ದ್ಯುತಿಂ ಉನ್ಮೀಲತಾಂ ವಿಕಾಸಂ ಪ್ರಾಪ್ತಾನಾಂ ಕುಂದಾನಾಂ ಕುಂದಪುಷ್ಪಾಣಾಂ ವೃಂದಸ್ಯ ಸಮೂಹಸ್ಯ ದ್ಯುತಿಂ ಕಾಂತಿಂ ಅತಿಶಯತಃ ಅತಿಶಯೇನ ಹಸಂತ್ಯಾ, ಮತ್ತ್ವರತಃ ಕೇಯಂ ಕುಂದವೃಂದದ್ಯುತಿರಿತಿ ಪರಿಹಾಸಂ ಕುರ್ವತ್ಯಾ, ಕುಂದವೃಂದದ್ಯುತೇರಪ್ಯತಿ-ಶಯಿತಯಾ ಇತಿ ಯಾವತ್, ಉಲ್ಲಸಂತ್ಯಾ ಪ್ರಕಾಶಮಾನಯಾ, ಅಧರೋಷ್ಠಾ-ರುಣಿಮನಿ ಅಧರೋಷ್ಠಾರುಣಕಾಂತೌ ಮಜ್ಜಂತ್ಯಾ ಮಗ್ನಯಾ, ಅಧರೋಷ್ಠಾರುಣ-ಕಾಂತಿಮಿಶ್ರಯಾ ಇತಿಯಾವತ್, ದಂತಪಂಕ್ತ್ಯಂತಕಾಂತ್ಯಾ ದಂತಪಂಕ್ತ್ಯೋಃ ಅಂತಾನಾಂ ಅಗ್ರಾಣಾಂ ಕಾಂತ್ಯಾ ರುಚಿರಂ ಮನೋಹರಂ ವಿಷ್ಣೋಃ ಮುಖಾಬ್ಜಂ ಮುಖಕಮಲಂ ವಂದೇ ನಮಸ್ಕರೋಮಿ, ಸ್ತೌಮಿ ಚ। ವದಿ ಅಭಿವಾದನಸ್ತುತ್ಯೋರಿತ್ಯಸ್ಮಾತ್ಕರ್ತರಿ ಲಟ್ ॥೨೬॥

**ಅನ್ವಯ:-** ಮಣಿಮಕರಚಲತ್‌ಕುಂಡಲೋಲ್ಲಾಸಿಗಂಡಂ, ಚಾರುಭ್ರು, ಉನ್ನಮ್ರ-ನಾಸಂ, ಸರಸಿಜನಯನಂ, ತಾಮ್ರಕಮ್ರಾಧರೋಷ್ಠಂ, ಉನ್ಮೀಲತ್ಕುಂದವೃಂದದ್ಯುತಿಂ ಅತಿಶಯತಃ ಹಸಂತ್ಯಾ ಉಲ್ಲಸಂತ್ಯಾ ಅಧರೋಷ್ಠಾರುಣಿಮನಿ ಮಜ್ಜಂತ್ಯಾ ದಂತಪಂಕ್ತ್ಯಂತ-ಕಾಂತ್ಯಾ ರುಚಿರಂ, ವಿಷ್ಣೋಃ ಮುಖಾಬ್ಜಂ ವಂದೇ।

**ಅನ್ವಯಾರ್ಥ:-** **ಮಣಿ....ಗಂಡಂ,** **ಮಣಿ** = ರತ್ನಖಚಿತವಾದ, **ಮಕರ** = ಮೊಸಳೆಯ ಆಕಾರದ, **ಚಲತ್** = ಚಲಿಸುತ್ತಿರುವ, **ಕುಂಡಲ** = ಕಿವಿಯ ಆಭರಣಗಳಿಂದ, **ಉಲ್ಲಾಸಿ** = ಅತ್ಯಂತ ಪ್ರಕಾಶಮಾನವಾದ, **ಗಂಡಂ** = ಕಪೋಲಗಳುಳ್ಳ, **ಚಾರುಭ್ರು** = ಮನೋಹರವಾದ ಹುಬ್ಬುಗಳುಳ್ಳ, **ಉನ್ನಮ್ರನಾಸಂ** = ಎತ್ತರವಾದ ಮೂಗುಳ್ಳ, **ಸರಸಿಜನಯನಂ** = ಕಮಲದಂತಹ ಕಣ್ಣುಗಳುಳ್ಳ, **ತಾಮ್ರ** = ಕೆಂಪಾದ, **ಕಮ್ರ** = ಸುಂದರವಾದ, **ಅಧರೋಷ್ಠಂ** = ಕೆಳದುಟಿಯುಳ್ಳ, **ಉನ್ಮೀಲತ್** = ಅರಳಿರುವ, **ಕುಂದ-ವೃಂದ** = ಮಾಗಿ ಮಲ್ಲಿಗೆ ಹೂವುಗಳ ರಾಶಿಯ, **ದ್ಯುತಿಂ**= ಕಾಂತಿಯನ್ನು, **ಅತಿಶಯತಃ** = ತನ್ನ ಉತ್ಕರ್ಷದಿಂದ, **ಹಸಂತ್ಯಾ** = ಪರಿಹಾಸಮಾಡುತ್ತಿರುವ, **ಉಲ್ಲಸಂತ್ಯಾ** = ಪ್ರಕಾಶ-ಮಾನವಾದ, **ಚ** = ಮತ್ತು, **ಅಧರೋಷ್ಠಾರುಣಿಮನಿ** = ಕೆಳದುಟಿಯ ನಸುಗೆಂಪುಕಾಂತಿ-ಯಲ್ಲಿ, **ಮಜ್ಜಂತ್ಯಾ** = ಮುಳುಗಿಹೋಗುತ್ತಿರುವ, **ದಂತಪಂಕ್ತಿ** = ಹಲ್ಲುಗಳ ಎರಡು-ಸಾಲುಗಳ, **ಅಂತ** = ತುದಿಗಳ, **ಕಾಂತ್ಯಾ** = ಪ್ರಭೆಯಿಂದ, **ರುಚಿರಂ** = ಮನೋಹರವಾದ, **ವಿಷ್ಣೋಃ** = ಶ್ರೀಮನ್ನಾರಾಯಣನ, **ಮುಖಾಬ್ಜಂ** = ಮುಖಕಮಲವನ್ನು, **ವಂದೇ** = ನಮಸ್ಕರಿಸುತ್ತೇನೆ ಮತ್ತು ಸ್ತೋತ್ರಮಾಡುತ್ತೇನೆ.

**ತಾತ್ಪರ್ಯ:-** ಶ್ರೀಮನ್ನಾರಾಯಣನು ತನ್ನೆರಡು ಕಿವಿಗಳಲ್ಲಿ ಮಕರಾಕೃತಿಯ ರತ್ನಕುಂಡಲಗಳನ್ನು ಧರಿಸಿರುತ್ತಾನೆ. ಅವುಗಳು ಇತ್ತ ಅತ್ತ ಚಲಿಸುವಾಗ ಶ್ರೀಹರಿಯ ಕಪೋಲಗಳು ಪ್ರಕಾಶಮಾನವಾಗುತ್ತಾ ಇರುತ್ತವೆ. ಶ್ರೀಹರಿಯ ಹುಬ್ಬುಗಳೆರಡೂ ಪರಮ-ಸುಂದರವಾಗಿವೆ. ಮೂಗು ಎತ್ತರವಾಗಿದೆ. ಕಣ್ಣುಗಳು ಅರಳಿದ ಕಮಲಗಳಂತಿವೆ. ತುಟಿಯು ಕೆಂಪಾಗಿ ಮನೋಹರವಾಗಿದೆ. ಪರಮಾತ್ಮನ ಹಲ್ಲುಗಳ ಎರಡುಸಾಲುಗಳ ತುದಿಗಳ ಕಾಂತಿಯು ಮಾಗಿಮಲ್ಲಿಗೆಹೂವಿನ ರಾಶಿಯ ಕಾಂತಿಯನ್ನು ಅಪಹಾಸ್ಯ-ಮಾಡುವಂತಿದೆ. ಮಂದಹಾಸದ ಬಿಳಿಯ ಕಾಂತಿಯು ಕೆಳದುಟಿಯ ಕೆಂಪುಕಾಂತಿಯಲ್ಲಿ

ಸೇರಿದಾಗ ಶ್ರೀಹರಿಯ ಮುಖದಲ್ಲಿ ಅದ್ಭುತವಾದ ಶೋಭೆಯುಂಟಾಗುತ್ತದೆ. ಇಂತಹ ಅದ್ಭುತಸೌಂದರ್ಯವುಳ್ಳ ಶ್ರೀಹರಿಯ ಮುಖಕಮಲವನ್ನು ನಾನು ಸ್ತುತಿಸುತ್ತೇನೆ ಮತ್ತು ನಮಸ್ಕರಿಸುತ್ತೇನೆ.

**ಆನಂದಂ ಸಂದಧಾನೋ ಹೃದಿಮದಮದಯಂ ಮಂದಯನ್ನಿಂದ್ರಿಯಾಣಾಂ**
**ತನ್ವನ್ ದಾಂತಿಂ ದುರಂತಂ ದುರಿತದರದುಹಂ ದ್ರಾವಯನ್ ದೋಷರಾಶಿಮ್ ।**
**ಕೈವಲ್ಯಂ ದ್ಯೋತಯನ್ ಸ್ವಂ ದಿವಸಮನು ಸತಾಂ ದಾಸತಾಂ ದರ್ಶಯನ್ನೋ**
**ಮೌಕುಂದೋ ಮಂದಹಾಸೋ ದಿಶತು ಕೃತದಯೋ ವಂದಿತಃ ಸ್ವಾಪರೋಕ್ಷಮ್॥೨೭**

**ವ್ಯಾಖ್ಯಾನ:-** ಶ್ಲೋಕದ್ವಯೇನ ಮಂದಸ್ಮಿತಂ ಸ್ತೌತಿ-**ಆನಂದಮಿತಿ** ॥ ಅನುದಿವಸಂ (ಅನು) ಪ್ರತಿದಿವಸಂ ಸತಾಂ ಸಜ್ಜನಾನಾಂ ಆನಂದಂ ಸಂತೋಷಂ ಸಂದಧಾನಃ, ಕುರ್ವಾಣಃ, ಸತಾಮಿತ್ಯಸ್ಯ ಸರ್ವತ್ರ ಸಂಬಂಧೋ ದ್ರಷ್ಟವ್ಯಃ । ಸತಾಂ ಹೃದಿ, ಗತಂ ಇತಿಶೇಷಃ । ಮದಂ ದರ್ಪಂ ಅದಯಂ ಯಥಾ ಭವತಿ ತಥಾ, ಮಂದಯನ್ ಮಂದಂ ಕುರ್ವನ್, ಸತಾಂ ಸತ್‌ಸಂಬಂಧಿನಾಂ ಇಂದ್ರಿಯಾಣಾಂ ದಾಂತಿಂ ಖಂಡನಂ ನಿಗ್ರಹಮಿತಿ ಯಾವತ್, ತನ್ವನ್ ಕುರ್ವನ್, ದುರಂತಂ ಅಂತರಹಿತಂ, ದುರಿತಾತ್ ವ್ಯಾಧ್ಯಾದೇಃ ದರಂ ಭಯಂ, ದರೋऽಸ್ತ್ರೀ ಶಂಖಭಯಯೋಃ ಇತಿ ರತ್ನಮಾಲಾ, ದುಹಂ ದೋಗ್ಧೀತಿ ಧುಕ್ ತಂ, ದುರಿತದರ (ಭಯ)ಪ್ರದಮಿತಿಯಾವತ್ ಸತಾಂ ದೋಷರಾಶಿಂ ರಾಗಾದಿ -ದೋಷಸಮುದಾಯಂ ದ್ರಾವಯನ್ ದೂರೀಕುರ್ವನ್, ಸತಾಂ ಸ್ವಂ ಸ್ವರೂಪ-ಭೂತಂ ಕೈವಲ್ಯಂ ಮೋಕ್ಷಂ ದ್ಯೋತಯನ್ ಪ್ರಕಟಯನ್ ಸತಾಂ ದಾಸತಾಂ ಸ್ವ-ಭೃತ್ಯತಾಂ ದರ್ಶಯನ್ ಜ್ಞಾಪಯನ್ ಕೃತದಯಃ (ಭಕ್ತೇಷುದಯಮಾನಃ) ಮೌಕುಂದಃ ಮುಕುಂದಸಂಬಂಧೀ ಮಂದಹಾಸಃ, ಮಂದಸ್ಮಿತಂ, ವಂದಿತಃ ಸನ್ ನಮಸ್ಕೃತಃ ಸ್ತುತಶ್ಚಸನ್ ನಃ ಅಸ್ಮಾಕಂ ಸ್ವಾಪರೋಕ್ಷಂ ಸ್ವಸ್ಯ ಶ್ರೀವಿಷ್ಣೋಃ ಅಪರೋಕ್ಷ-ಜ್ಞಾನಂ ದಿಶತು, ದಾನಾರ್ಥಾದ್ದಿಶಧಾತೋಃ ಕರ್ತರಿ ಲೋಟ್ ॥೨೭॥

**ಅನ್ವಯ –** ಅನುದಿವಸಂ, ಸತಾಂ ಆನಂದಂ ಸಂದಧಾನಃ, (ಸತಾಂ) ಹೃದಿ (ಗತಂ) ಮದಂ ಅದಯಂ ಮಂದಯನ್, (ಸತಾಂ) ಇಂದ್ರಿಯಾಣಾಂ ದಾಂತಿಂ ತನ್ವನ್, ದುರಂತಂ ದುರಿತದರದುಹಂ ದೋಷರಾಶಿಂ ದ್ರಾವಯನ್, (ಸತಾಂ) ಸ್ವಂ ಕೈವಲ್ಯಂ ದ್ಯೋತಯನ್,

(ಸತಾಂ) ದಾಸತಾಂ ದರ್ಶಯನ್, ಕೃತದಯಃ ಮೌಕುಂದಃ ಮಂದಹಾಸಃ ವಂದಿತಃ (ಸನ್) ನಃ ಸ್ವಾಪರೋಕ್ಷಂ ದಿಶತು ।

**ಅನ್ವಯಾರ್ಥ –** **ಅನುದಿವಸಂ** = ಪ್ರತಿದಿನವೂ, **ಸತಾಂ** = ಸಜ್ಜನರಿಗೆ, **ಆನಂದಂ** = ಸಂತೋಷವನ್ನು, **ಸಂದಧಾನಃ** = ಉಂಟುಮಾಡುತ್ತಿರುವ, (ಸತಾಂ) **ಹೃದಿ** (ಗತಂ)= ಅಂತಃಕರಣದಲ್ಲಿರುವ, **ಮದಃ** = ಅಹಂಕಾರವನ್ನು, **ಅದಯಂ** = ದಯೆಯಿಲ್ಲದೆ, **ಮಂದಯನ್** = ಕಡಿಮೆಮಾಡುತ್ತಿರುವ, (ಸತಾಂ = ಸಜ್ಜನರಿಗೆ ಸಂಬಂಧಿಸಿರುವ ) **ಇಂದ್ರಿಯಾಣಾಂ** = ಇಂದ್ರಿಯಗಳಿಗೆ, **ದಾಂತಿಂ** = ನಿಗ್ರಹವನ್ನು, **ತನ್ವನ್** = ಮಾಡು-ತ್ತಿರುವ, **ದುರಂತಂ** = ಕೊನೆಯಿಲ್ಲದ, **ದುರಿತದರದುಹಂ** = ವ್ಯಾಧಿಮೊದಲಾದು-ವುಗಳಿಂದ ಉಂಟಾಗುವ ಭಯಕ್ಕೆ ಕಾರಣವಾದ, **ದೋಷರಾಶಿಂ** = ರಾಗದ್ವೇಷಾದಿ-ದೋಷ ಸಮುದಾಯವನ್ನು, **ದ್ರಾವಯನ್** = ಓಡಿಸುವ, (ಸತಾಂ) **ಸ್ವಂ** = ಸ್ವರೂಪವೇ ಆಗಿರುವ, **ಕೈವಲ್ಯಂ** = ಮೋಕ್ಷವನ್ನು , **ದ್ಯೋತಯನ್** = ಪ್ರಕಟ- ಗೊಳಿಸುತ್ತಿರುವ, (ಸತಾಂ) **ದಾಸತಾಂ** = ತನ್ನ ಭೃತ್ಯರೆಂಬ ಭಾವವನ್ನು, **ದರ್ಶಯನ್** = ಜ್ಞಾಪಿಸುತ್ತಿರುವ, **ಕೃತದಯಃ** = ಭಕ್ತರಲ್ಲಿ ದಯೆತೋರುವ, **ಮೌಕುಂದಃ** = ಶ್ರೀಮನ್ನಾರಾಯಣಸಂಬಂಧಿ ಯಾದ, **ಮಂದಹಾಸಃ** = ಎಳೆಯನಗುವು, **ವಂದಿತಃ ಸನ್**= ನಮ್ಮಿಂದ ನಮಸ್ಕರಿಸ-ಲ್ಪಟ್ಟುದಾಗಿ, ಸ್ತೋತ್ರಮಾಡಿಸಿಕೊಳ್ಳಲ್ಪಟ್ಟುದಾಗಿ, **ನಃ** = ನಮಗೆ, **ಸ್ವ**= ತನ್ನ(ಶ್ರೀವಿಷ್ಣುವಿನ), **ಅಪರೋಕ್ಷಂ** = ಪ್ರತ್ಯಕ್ಷದರ್ಶನವನ್ನು, **ದಿಶತು** = ಕೊಡಲಿ.

**ತಾತ್ಪರ್ಯ:-** ಈ ಪದ್ಯದಿಂದ ಶ್ರೀವಿಷ್ಣುವಿನ ಮಂದಹಾಸವನ್ನು ವರ್ಣಿಸುತ್ತಾರೆ-ಶ್ರೀಹರಿಯ ಮಂದಹಾಸವು ಪ್ರತಿದಿವಸವೂ ಸಾತ್ತ್ವಿಕಜನರಿಗೆ, ಮುಕ್ತಭಕ್ತರಿಗೆ ಆನಂದ-ವೃಂದವನ್ನು ಉಂಟುಮಾಡುತ್ತದೆ. ಸಜ್ಜನರಾದ ತನ್ನ ಭಕ್ತರ ಹೃದಯದಲ್ಲಿರುವ ದರ್ಪ-ಅಹಂಕಾರಾದಿ ದೋಷವನ್ನು ನಿರ್ದಾಕ್ಷಿಣ್ಯವಾಗಿ, ಖಂಡಿತವಾಗಿ ಕಡಿಮೆಮಾಡುತ್ತದೆ. ಕೊನೆಗೆ ಪೂರ್ತಿಯಾಗಿ ನಾಶಮಾಡುತ್ತದೆ. ಸಾತ್ತ್ವಿಕಜನರ ಮೇಲೆ ಬಿದ್ದ ಆ ಮಂದಹಾಸವು ಅವರ ಇಂದ್ರಿಯಗಳಿಗೆ ನಿಗ್ರಹವನ್ನು ಒದಗಿಸಿಕೊಡುತ್ತದೆ. ಹರಿಯ ಮಂದಹಾಸ ಪಾತ್ರರಾದ ಭಕ್ತರು ಜಿತೇಂದ್ರಿಯರಾಗುತ್ತಾರೆ. ಶ್ರೀಹರಿಯ ಮಂದಹಾಸವು ಆಧಿವ್ಯಾಧಿ ಗಳಿಗೆ ಕಾರಣವಾದ ರಾಗದ್ವೇಷಾದಿ ಅನಂತಪಾಪರಾಶಿಯನ್ನು ದೂರಕ್ಕೆ ಓಡಿಸುತ್ತದೆ.

ಸಜ್ಜನರಿಗೆ ಇಂತಹ ಆನಂದಹಾಸಮಯವಾದ ಅವರ ಸ್ವರೂಪವೇ ಆಗಿರುವ ಮೋಕ್ಷವು ಸಿಗುತ್ತದೆ ಎಂಬ ತತ್ತ್ವವನ್ನು ಮುಕ್ತಿಯೋಗ್ಯ ಭಕ್ತಜನರ ಕಡೆಗೆ ಬೀರುತ್ತಿರುವ ಮಂದಹಾಸವು ಸೂಚಿಸುತ್ತದೆ. ನನ್ನ ಮಂದಹಾಸದ ವರ್ತುಲಕ್ಕೆ ಸಿಕ್ಕಿರುವ ಈ ಭಕ್ತರೆಲ್ಲರೂ ನನ್ನ ದಾಸರು-ಎಂದೆಂದೂ ನನ್ನ ಅನುಗ್ರಹದಿಂದ ಆನಂದ ಮಂದಹಾಸಭರಿತರಾಗಿರುತ್ತಾರೆ ಎಂಬ ವಿಷಯವನ್ನು ತಿಳಿಸಿಕೊಡುತ್ತದೆ. ನಾವು ಆ ಮಂದಹಾಸದರ್ಶನಕ್ಕಾಗಿ ನಿರಂತರ ಅವನನ್ನು ಸ್ತುತಿಸುತ್ತೇವೆ ಮತ್ತು ನಮಸ್ಕರಿಸುತ್ತೇವೆ. ಆ ಮಂದಹಾಸವು ನಮ್ಮ ಮೇಲೆ ದಯೆತೋರಿ ಮೊದಲು ಪ್ರಸಾದಕ್ಕೆ ಕಾರಣವಾದ ಅವನ ದಿವ್ಯ ಅಪರೋಕ್ಷದರ್ಶನವನ್ನು ನಮಗೆ ಕೊಡಲಿ.

**ಸುವ್ಯಕ್ತೋದ್ರಿಕ್ತಭಕ್ತಿಪ್ರಸರಭರನಮನ್ನಾಕಿಲೋಕಾವಲೋಕ**
**ಪ್ರೋದ್ಯತ್ಪ್ರೌಢಾನುಕಂಪಾಪರವಶವಿಶದವ್ಯಂಜಿತಾಣುಸ್ಮಿತೇಂದೋಃ ।**
**ನಿರ್ಯನ್ನೀರೋಧನಾನಾಮುಖಸುಖರಮಯೂಖೋತ್ಕರೋತ್ಕಾಸ್ಯಮಾನೈಃ**
**ಸಾಕಂ ಪೀಯೂಷಪೂರೈಃ ಸ್ನಪಯತು ಸುಜನೈರ್ಮಾಂ ಜಗಜ್ಜನ್ಮಭೂಮಿಃ ॥೨೮॥**

**ವ್ಯಾಖ್ಯಾನ:- ಸುವ್ಯಕ್ತೇತಿ ॥** ಜಗಜ್ಜನ್ಮಭೂಮಿಃ ಜಗತಾಂ ಜನ್ಮಸ್ಥಾನಂ ಜಗದುತ್ಪಾದಕಃ ಇತಿಯಾವತ್, ಶ್ರೀವಿಷ್ಣುಃ, ಸುಷ್ಠು ಅಭಿವ್ಯಕ್ತಾಯಾಃ ಉದ್ರಿಕ್ತಾಯಾಃ ಅಭಿವೃದ್ಧಾಯಾಃ ಭಕ್ತೇಃ ಯಃ ಪ್ರಸರಃ ವಿಸ್ತಾರಃ ತಸ್ಯ ಭರೇಣ (ಅತಿಶಯೇನ) ನಮತಃ ನಮ್ರಸ್ಯ ನಾಕಿ-ಲೋಕಸ್ಯ ದೇವಲೋಕಸ್ಯ ಅವಲೋಕೇನ ಅವಲೋಕನೇನ (ದರ್ಶನೇನ) ಪ್ರೋದ್ಯತ್ಯಾ ಪ್ರಕರ್ಷೇಣ ಉದಯಂ ಆಪ್ನುವತ್ಯಾ ಪ್ರೌಢಯಾ ದೃಢಯಾ ಬಹುಲಯೇತಿಯಾವತ್ ಅನುಕಂಪಯಾ ಪರವಶೇನ (ಅಧೀನತಯಾ) ವಿಶದಂ ಸ್ಪಷ್ಟಂ ಯಥಾ ಭವತಿ ತಥಾ ವ್ಯಂಜಿತಂ ವ್ಯಕ್ತತಾಂ ಪ್ರಾಪಿತಂ ಅನುಸ್ಮಿತಂ ಅನುಗ್ರಹಪೂರ್ವಕಂ ಸ್ಮಿತಂ, ಅಣುಸ್ಮಿತಂ ಇತಿಪಾಠೇ ಮಂದಸ್ಮಿತಮ್ ಇತ್ಯರ್ಥಃ, ತಲ್ಲಕ್ಷಣಾದಿಂದೋಃ ಚಂದ್ರಾತ್ ನಿರ್ಯತಾಂ ನಿರ್ಗಚ್ಛತಾಂ ನೀರೋಧಾನಾಂ ಗತನಿರೋಧನಾನಾಂ ಅವ್ಯಾಹತಗತೀನಾಮಿತಿ-ಯಾವತ್, ನಾನಾಮುಖಾನಾಂ ನಾನಾಪ್ರಕಾರಾಣಾಂ ಸುಖಂ ರಾಂತಿ ದದತೀತಿ ಸುಖರಾಃ , ಆತೋಽನುಪಸರ್ಗೇ ಕಃ(೩-೨-೩) ಇತಿ ಕಃ ಮಯೂಖಾಃ ಕಿರಣಾಃ ತೇಷಾಂ ಉತ್ಕರಾತ್ ಸಮುದಾಯಾತ್ ಉತ್ಕಾಸ್ಯಮಾನೈಃ ನಿಷ್ಕಾಸ್ಯಮಾನೈಃ

ಪೀಯೂಷಪೂರ್ಯೈಃ ಅಮೃತಪ್ರವಾಹ್ಯೈಃ ಪ್ರಯೋಜ್ಯಕರ್ತೃಭಿಃ ಸುಜನ್ಯೈಃ ಸಾಕಂ ಸಜ್ಜನ್ಯೈಃ ಸಹ ಮಾಂ ಸ್ನಪಯತು ಸ್ನಾನಂ ಕಾರಯತು । ಷ್ಣಾ ಶೌಚೇ ಇತ್ಯಸ್ಮಾತ್ ಣ್ಯಂತಾತ್ ಲೋಟ್ ॥೨೮॥

**ಅನ್ವಯ –** ಜಗಜ್ಜನ್ಮಭೂಮಿಃ (ಶ್ರೀವಿಷ್ಣುಃ) ಸುವ್ಯಕ್ತೋದ್ರಿಕ್ತಭಕ್ತಿ ಪ್ರಸರಭರನಮನ್ನಾಕಿಲೋಕಾವಲೋಕಪ್ರೋದ್ಯತ್ ಪ್ರೌಢಾನುಕಂಪಾಪರವಶವಿಶದವ್ಯಂಜಿತಾನುಸ್ಮಿತೇಂದೋಃ ನಿರ್ಯನ್ನೀರೋಧನಾನಾ ಮುಖಸುಖರಮಯೂಖೋತ್ಕರೋತ್ಕಾಸ್ಯಮಾನ್ಯೈಃ ಪೀಯೂಷಪೂರ್ಯೈಃ ಸುಜನ್ಯೈಃ ಸಾಕಂ ಮಾಂ ಸ್ನಪಯತು ।

**ಅನ್ವಯಾರ್ಥ –** ಜಗಜ್ಜನ್ಮಭೂಮಿಃ = ಸಮಸ್ತಪ್ರಪಂಚದ ಉತ್ಪತ್ತಿ ಕಾರಣನಾದ (ಶ್ರೀವಿಷ್ಣುಃ = ಶ್ರೀವಿಷ್ಣುವು) ಸುವ್ಯಕ್ತೋದ್ರಿಕ್ತ....ಸ್ಮಿತೇಂದೋಃ, ಸುವ್ಯಕ್ತ = ಬಹಳ ಸ್ಪಷ್ಟವಾದ, ಉದ್ರಿಕ್ತ = ಉಕ್ಕಿರುವ (ಶ್ರೇಷ್ಠವಾದ) ಭಕ್ತಿ = ಸ್ನೇಹವಿಶೇಷದ, ಪ್ರಸರ = ವಿಸ್ತಾರದ, ಭರ = ಅತಿಶಯದಿಂದ, **ನಮತ್** = ನಮಸ್ಕರಿಸುತ್ತಿರುವ, ನಾಕಿಲೋಕ = ದೇವಸಮೂಹದ, **ಅವಲೋಕ** = ನೋಟದಿಂದ, **ಪ್ರೋದ್ಯತ್** = ಅತಿಶಯವಾಗಿ ಆವಿರ್ಭವಿಸುತ್ತಿರುವ, **ಪ್ರೌಢ** = ಅತಿಶಯವಾದ, **ಅನುಕಂಪಾ**= ದಯೆಯಿಂದ (ಉಂಟಾದ), **ಪರವಶ** = (ಭಕ್ತರಿಗೆ) ಅಧೀನತೆ ಅನುಗ್ರಹಪೂರ್ವಕವಾದ ಮುಗುಳುನಗೆಯೆಂಬ (**ಅಣುಸ್ಮಿತ** = ಅಲ್ಪವಾದ ಮಂದಹಾಸವೆಂಬ), **ಇಂದೋಃ** = ಚಂದ್ರನ ದೆಸೆಯಿಂದ, **ನಿರ್ಯನ್ನೀರೋಧ..ಕಾಸ್ಯಮಾನ್ಯೈಃ**, **ನಿರ್ಯತ್** = ಹೊರಹೊಮ್ಮುತ್ತಿರುವ, ನೀರೋಧ = ತಡೆಯಿಲ್ಲದ, **ನಾನಾಮುಖ** = ಅನೇಕಪ್ರಕಾರವಾಗಿರುವ, **ಸುಖರ** = ಆನಂದಪ್ರದವಾದ, **ಮಯೂಖ** = ಕಿರಣಗಳ, **ಉತ್ಕರ** = ಸಮೂಹದ ದೆಸೆಯಿಂದ, **ಉತ್ಕಾಸ್ಯಮಾನ್ಯೈಃ** = ಹೊರಗೆ ಚೆಲ್ಲಲ್ಪಡುತ್ತಿರುವ, **ಪೀಯೂಷಪೂರ್ಯೈಃ** = ಅಮೃತ ಪ್ರವಾಹಗಳಿಂದ, **ಸುಜನ್ಯೈಃ ಸಾಕಂ** = ಭಕ್ತಜನರಿಂದ ಸಹಿತವಾಗಿ, **ಮಾಂ** = ನನ್ನನ್ನು, **ಸ್ನಪಯತು** = ಸ್ನಾನಮಾಡಿಸಲಿ.

**ತಾತ್ಪರ್ಯ –** ಚೆನ್ನಾಗಿ ಪ್ರಕಟವಾದ, ಉಕ್ಕುತ್ತಿರುವ ಭಕ್ತಿಯ ವಿಸ್ತಾರ ವಿಶೇಷದ ಅತಿಶಯದಿಂದ ಸಹಿತರಾಗಿ, ದೇವತೆಗಳು ಶ್ರೀಹರಿಯ ಪಾದಗಳಲ್ಲಿ ಬಾಗಿ ನಮಸ್ಕರಿಸು-

ತ್ತಾರೆ. ಅವರನ್ನು ನೋಡಿದಾಗ ಶ್ರೀಹರಿಯಲ್ಲಿ ಆ ದೇವತೆಗಳ ವಿಷಯದಲ್ಲಿ ಬಹಳವಾದ ದಯೆಯು ಆವಿರ್ಭವಿಸುತ್ತದೆ, ಆಗ ಶ್ರೀಹರಿಯ ಮುಖದಲ್ಲಿ ಅನುಗ್ರಹಪೂರ್ವಕವಾದ ಮಂದಹಾಸವು ಸ್ಪಷ್ಟವಾಗಿ ಅಭಿವ್ಯಕ್ತವಾಗುತ್ತದೆ. ಇಂತಹ ಮಂದಹಾಸವೆಂಬ ಚಂದ್ರನಿಂದ ತಡೆಯಿಲ್ಲದೆ ಸಾತ್ತ್ವಿಕಭಕ್ತಜನರಿಗೆ ಅತಿಶಯಾನಂದಪ್ರದವಾದ ನಾನಾಪ್ರಕಾರವಾದ ಕಿರಣಸಮೂಹಗಳು ನಿರಂತರವಾಗಿ ಹೊರಹೊಮ್ಮುತ್ತಾ ಇರುತ್ತವೆ. ಅವುಗಳ ಜತೆಗೆ ಅಮೃತಪ್ರವಾಹಗಳೂ ಹೊರಬರುತ್ತಾ ಇರುತ್ತವೆ. ತನ್ನ ಮಂದಸ್ಮಿತಚಂದ್ರನ ಕಿರಣಗಳಿಂದ ಹೊರಬರುತ್ತಿರುವ ಈ ಅಮೃತಪ್ರವಾಹಗಳಿಂದ ಶ್ರೀಹರಿಯು ಅವನ ಅನುಗ್ರಹ-ಯೋಗ್ಯರಾದ ಸಜ್ಜನರ ಜತೆಗೆ ನನಗೆ ಸ್ನಾನ ಮಾಡಿಸಲಿ- ನನ್ನನ್ನು ಅಮೃತಕ್ಕೆ (ಮುಕ್ತಿಗೆ) ಯೋಗ್ಯನನ್ನಾಗಿ ಮಾಡಲಿ.

**ಯಸ್ಮಾದಾಸ್ಮಾಕಮಿತ್ರಾದಮಿತಮಹಿಮತೋ ಹೃಷ್ಯತೋ ರುಷ್ಯತೋ ವಾ**
**ಲೋಕಾಃ ಪುಷ್ಯಂತಿ ಶುಷ್ಯಂತ್ಯಪಿ ಖಲು ನಿಖಿಲಾಃ ಸಾಕಮಾಕಂ ಪರಸ್ಯ ।**
**ಸೋಽಯಂ ಸೋಪಾನಭೂಮಿರ್ವಿಧಿಭವವಿಭವೋದ್ಭಾವಯಿತ್ರ್ಯಾಃ ಸವಿತ್ರ್ಯಾಃ**
**ಸ್ರಷ್ಟ್ರೂಣಾಂ ದೃಷ್ಟಿಪಾತೇ ಜಯತಿ ಜನಿಮೃತೇರ್ಮೋಕ್ಷಹೇತುಃ ಕಟಾಕ್ಷಃ ॥೨೯**

**ವ್ಯಾಖ್ಯಾನ–** ಕಟಾಕ್ಷಂ ವರ್ಣಯತಿ – **ಯಸ್ಮಾದಿತಿ** ॥ ಆಸ್ಮಾಕಮಿತ್ರಾತ್ ಅಸ್ಮಾಕಂ ಸಂಬಂಧಿ ಆಸ್ಮಾಕಂ, ಆಸ್ಮಾಕಂ ಚ ತತ್ ಮಿತ್ರಂ ಚ (ಆಸ್ಮಾಕಮಿತ್ರಂ) ತಸ್ಮಾತ್ ಅಮಿತ-ಮಹಿಮತಃ ಅಮಿತಃ ಮಹಿಮಾ ಯಸ್ಯ ತಸ್ಮಾತ್ ಹೃಷ್ಯತಃ ಹರ್ಷಯುಕ್ತಾತ್ ಯಸ್ಮಾತ್ ಕಟಾಕ್ಷಾತ್, ನಿಖಿಲಾಃ ಲೋಕಾಃ ಭೂಮ್ಯಾದಯಃ ಪುಷ್ಟಾ ಭವಂತಿ, ರುಷ್ಯತೋ ವಾ ಲೋಕಾಃ ಶುಷ್ಯಂತಿ ಶೋಷಣಮಪಿ ಪ್ರಾಪ್ನುವಂತಿ, ಸಾಕಂ ಸಹೈವ ಆಕಂ ಬ್ರಹ್ಮ-ಪರ್ಯಂತಂ ಸಂತಃ ಹೃಷ್ಯಂತಿ ಅಸಂತಃ ಶುಷ್ಯಂತಿ ಇತ್ಯರ್ಥಃ, ಪುಷ್ಯಂತಿ ಪೋಷಯುಕ್ತಾ ಭವಂತಿ ಖಲು, ಖಲ್ವಿತಿ ಪ್ರಸಿದ್ಧೌ, ಅಥವಾ ರುಷ್ಯತಃ ರೋಷಯುಕ್ತಾತ್ ಯಸ್ಮಾತ್ ಕಟಾಕ್ಷಾತ್, ನಿಖಿಲಾಃ ಶೋಷಯುಕ್ತಾ ಭವಂತಿ । ವಿಧಿಭವವಿಭವೋದ್ಭಾವಯಿತ್ರ್ಯಾಃ ವಿಧಿಭವಯೋಃ ಬ್ರಹ್ಮರುದ್ರಯೋಃ ವಿಭವಂ ಐಶ್ವರ್ಯಂ ಉದ್ಭಾವಯತಿ ಪ್ರಾಪ-ಯತೀತಿ ಉದ್ಭಾವಯಿತ್ರೀ ತಸ್ಯಾಃ ಭೂಪ್ರಾಪ್ತಾವಿತ್ಯಸ್ಮಾತ್ ಣ್ಯಂತಾತ್ ಕರ್ತರಿ ತೃಚಿ ತತೋಙೀಪ್ ಸ್ರಷ್ಟ್ರೂಣಾಂ ಜಗತ್ ಸ್ರಷ್ಟ್ರೂಣಾಂ ಬ್ರಹ್ಮಾದೀನಾಂ ಸವಿತ್ರ್ಯಾಃ

ಪ್ರಸವಿತ್ರ್ಯಾಃ ಮಹಾಲಕ್ಷ್ಮ್ಯಾಃ ದೃಷ್ಟಿಪಾತೇ ತಾದರ್ಥ್ಯೇ ಸಪ್ತಮೀ, ಅನುಗ್ರಹಪೂರ್ವಕ-ದೃಷ್ಟಿಪಾತಾರ್ಥಂ ಸೋಪಾನಭೂಮಿರಿವ, ಯಥಾ ಸೋಪಾನಭೂಮಿಮನುಸೃತ್ಯ ಜನೋಗಚ್ಛತಿ ತಥಾ ಸಂತಃ ಶ್ರೀವಿಷ್ಣುಕಟಾಕ್ಷಮನುಸೃತ್ಯ ಮಹಾಲಕ್ಷ್ಮೀಕಟಾಕ್ಷಂ ಪ್ರಾಪ್ನು-ವಂತೀತ್ಯರ್ಥಃ ಜನಿಮೃತೇಃ ಜನಿರುತ್ಪತ್ತಿಃ ತತ್ಸಹಿತಾಯಾಃ ಮೃತೇಃ ಮರಣಾತ್, ಮೋಕ್ಷಹೇತುಃ, ಸೋಽಯಂ ಪರಸ್ಯ ಪರಮಾತ್ಮನಃ ಕಟಾಕ್ಷಃ ಜಯತಿ, ಉತ್ಕೃಷ್ಟೋ ವರ್ತತೇ ॥೨೯॥

**ಅನ್ವಯಃ-** ಅಸ್ಮಾಕಮಿತ್ರಾತ್ ಅಮಿತಮಹಿಮತಃ ಹೃಷ್ಯತಃ ಯಸ್ಮಾತ್ ನಿಖಿಲಾಃ ಲೋಕಾಃ ಪುಷ್ಯಂತಿ ವಾ ರುಷ್ಯತಃ (ನಿಖಿಲಾಃ ಲೋಕಾಃ) ಶುಷ್ಯಂತಿ,ಅಪಿ ಸಾಕಂ ಆಕಂ (ಸಂತಃ)ಪುಷ್ಯಂತಿ (ಅಸಂತಃ)ಶುಷ್ಯಂತಿ ಖಲು (ರುಷ್ಯತಃ ಯಸ್ಮಾತ್ ನಿಖಿಲಾಃ ಶುಷ್ಯಂತಿ) ವಿಧಿಭವವಿಭವೋದ್ಭಾವಯಿತ್ರ್ಯಾಃ, ಸ್ರಷ್ಟೄಣಾಂ ಸವಿತ್ರ್ಯಾಃ ದೃಷ್ಟಿಪಾತೇ ಸೋಪಾನ-ಭೂಮಿಃ ಜನಿಮೃತೇಃ ಮೋಕ್ಷಹೇತುಃ ಸೋಽಯಂ ಪರಸ್ಯ ಕಟಾಕ್ಷಃ ಜಯತಿ.

**ಅನ್ವಯಾರ್ಥ:-** **ಅಸ್ಮಾಕಮಿತ್ರಾತ್** = ನಮ್ಮ ಸ್ನೇಹಿತನಾಗಿರುವ, **ಅಮಿತಮಹಿ-ಮ್ನತಃ** = ಅಪರಿಮಿತಸಾಮರ್ಥ್ಯವುಳ್ಳ, **ಹೃಷ್ಯತಃ** = ಆನಂದಾಭಿವ್ಯಕ್ತಿಯನ್ನು ಹೊಂದಿರುವ, **ಯಸ್ಮಾತ್** = ಯಾವ ಕಟಾಕ್ಷದ ದೆಸೆಯಿಂದ, **ನಿಖಿಲಾಃ** = ಎಲ್ಲಾ, **ಲೋಕಾಃ** = ಲೋಕಗಳು, **ಪುಷ್ಯಂತಿ** = ಪೋಷಣೆಯನ್ನು ಹೊಂದುತ್ತವೆ, **ವಾ** = ಅಥವಾ, **ರುಷ್ಯತಃ** = ಕೋಪದ ನಟನೆಯನ್ನು ಮಾಡುತ್ತಿರುವ, (**ಯಸ್ಮಾತ್** = ಯಾವ ಕಟಾಕ್ಷದ ದೆಸೆಯಿಂದ, **ನಿಖಿಲಾಃ ಲೋಕಾಃ** = ಎಲ್ಲಾಲೋಕಗಳೂ) **ಶುಷ್ಯಂತಿ ಅಪಿ** = ನಾಶವನ್ನೂಹೊಂದುತ್ತವೆ. **ಸಾಕಂ** = ಇದರ ಜೊತೆಗೆ, **ಆಕಂ** = ಬ್ರಹ್ಮದೇವರ ಪರ್ಯಂತವಾಗಿ (**ಸಂತಃ** = ಸಜ್ಜನರು,) **ಪುಷ್ಯಂತಿ** = ಪೋಷಣೆಯನ್ನು(ಸಂತೋಷವನ್ನು) ಹೊಂದುತ್ತಾರೆ. (**ಅಸಂತಃ**) **ಶುಷ್ಯಂತಿ ಖಲು** = ದುರ್ಜನರು ನಾಶಹೊಂದುತ್ತಾರಷ್ಟೆ, (**ರುಷ್ಯತಃ ಯಸ್ಮಾತ್ ನಿಖಿಲಾಃ ಶುಷ್ಯಂತಿ** = ರೋಷವನ್ನು ಪ್ರಕಟಪಡಿಸುವ ಯಾವ ಕಟಾಕ್ಷದಿಂದ ಎಲ್ಲವೂ ಎಲ್ಲರೂ ನಾಶಹೊಂದು-ತ್ತಾರೆ) **ವಿಧಿಭವವಿಭವೋದ್ಭಾವಯಿತ್ರ್ಯಾಃ** = ಬ್ರಹ್ಮ, ರುದ್ರರ ಐಶ್ವರ್ಯವನ್ನು ಕೊಡ-ತಕ್ಕ, **ಸ್ರಷ್ಟೄಣಾಂ ಸವಿತ್ರ್ಯಾಃ** = ಸೃಷ್ಟಿಕರ್ತರಾದ ಬ್ರಹ್ಮರ ತಾಯಿಯಾದ ಮಹಾಲಕ್ಷ್ಮೀ-ದೇವಿಯ, **ದೃಷ್ಟಿಪಾತೇ** = ಅನುಗ್ರಹಪೂರ್ವಕವಾದ ನೋಟದ ಪ್ರಾಪ್ತಿಗೋಸ್ಕರ,

**ಸೋಪಾನಭೂಮಿಃ** = ಮೆಟ್ಟಲಿನ ಪ್ರದೇಶದಂತಿರುವ, **ಜನಿಮೃತೇಃ** = ಜನನಸಹಿತವಾದ ಮರಣದ (ಜನನಮರಣಗಳ), **ಮೋಕ್ಷಹೇತುಃ** = ಬಿಡುಗಡೆಗೆ ಕಾರಣವಾದ, **ಸೋಽಯಂ**= ಹಿಂದೆ ಹೇಳಿರುವಂತಹ, **ಪರಸ್ಯ**= ಪರಮಾತ್ಮನ, **ಕಟಾಕ್ಷಃ** = ಕಡೆಗಣ್ಣಿನ ನೋಟವು, **ಜಯತಿ** = ಉತ್ಕೃಷ್ಟವಾಗಿರುತ್ತದೆ.

**ತಾತ್ಪರ್ಯ:-** ಶ್ರೀಹರಿಯ ಕಟಾಕ್ಷವು ನಮಗೆ ಸ್ನೇಹಿತನಂತೆ ಇರುತ್ತದೆ. ಮಹಾಮಹಿಮೆಯುಳ್ಳ ಶ್ರೀಹರಿಯ ಕಟಾಕ್ಷವು ಆನಂದಾಭಿವ್ಯಕ್ತಿಯನ್ನು ಹೊಂದಿ ಭೂಮ್ಯಾದಿಸಮಸ್ತಲೋಕಗಳನ್ನೂ ಪುಷ್ಟಗೊಳಿಸುತ್ತದೆ, ರಕ್ಷಿಸುತ್ತದೆ. ಕೋಪದ ನಟನೆಯನ್ನು ಮಾಡುವ ಆ ಕಟಾಕ್ಷದಿಂದಲೇ ಸಮಸ್ತಲೋಕಗಳೂ ನಾಶ ಹೊಂದುತ್ತವೆ. ಇದರ ಜೊತೆಗೇ ಬ್ರಹ್ಮದೇವರ ಪರ್ಯಂತವಾದ ಸಜ್ಜನರೆಲ್ಲರೂ ಪೋಷಣೆಯನ್ನೂ ಪಡೆಯುತ್ತಾರೆ, ಕೋಪದಿಂದಿರುವ ಅದೇ ಕಟಾಕ್ಷದಿಂದ ದುರ್ಜನರು ಕ್ಷೀಣಿಸುತ್ತಾರೆ ಮತ್ತು ನಾಶಹೊಂದುತ್ತಾರೆ. ಸಮಸ್ತ ಲೋಕಗಳೂ ಎಲ್ಲಾ ಚೇತನರೂ ಶ್ರೀಹರಿಯ ಕೋಪದ ಕಟಾಕ್ಷದಿಂದ ಪ್ರಲಯಕಾಲದಲ್ಲಿ ನಾಶಹೊಂದುತ್ತಾರೆ. ಬ್ರಹ್ಮರುದ್ರಾದಿಗಳಿಗೆ ಐಶ್ವರ್ಯವನ್ನು ಕೊಡತಕ್ಕ, ಸೃಷ್ಟಿಕರ್ತರಾದ ಅನಂತಬ್ರಹ್ಮದೇವರುಗಳಿಗೆ ತಾಯಿಯಾದ ಮಹಾಲಕ್ಷ್ಮೀದೇವಿಯ ಅನುಗ್ರಹಪೂರ್ವಕವಾದ ನೋಟವು ಭಕ್ತರ ಮೇಲೆ ಬೀಳುವುದಕ್ಕೆ ಶ್ರೀಹರಿಯ ಕಟಾಕ್ಷವು ಮೆಟ್ಟಲಿನಂತಿದೆ. ಸೋಪಾನವನ್ನು ಅನುಸರಿಸಿ ಜನರು ಮೇಲಕ್ಕೆ. ಹೋಗುವಂತೆ, ಭಗವಂತನ ಕಟಾಕ್ಷವನ್ನು ಅನುಸರಿಸಿ ಅದರ ಹಿಂದೆಯೇ ಲಕ್ಷ್ಮಿಯ ಕಟಾಕ್ಷವು ಭಕ್ತರ ಮೇಲೆ ಬಿದ್ದು, ಅವರು ಲೌಕಿಕ ಪಾರಲೌಕಿಕ ಅಭಿವೃದ್ಧಿಯನ್ನು ಪಡೆಯುತ್ತಾರೆ. ಶ್ರೀಹರಿಯ ಕಟಾಕ್ಷವು ಮುಮುಕ್ಷುಗಳಾದ ಸಾತ್ತ್ವಿಕ ಜನರ ಮೇಲೆ ಬಿದ್ದಾಗ ಅವರ ಜನನ ಮರಣ ಪ್ರವಾಹಗಳಿಗೆ ಅಂತಿಮ ನಾಶವುಂಟಾಗುತ್ತದೆ. ಜನನ ಮರಣಗಳಿಗೇ ಮೋಕ್ಷ (ಸಮಾಪ್ತಿ)ವು ಉಂಟಾಗುತ್ತದೆ. ಸರ್ವೋತ್ತಮನಾದ ಪರಮಾತ್ಮನ ಇಂತಹ ಕಟಾಕ್ಷವು ಅತ್ಯಂತ ಉತ್ಕೃಷ್ಟವಾಗಿದೆ. (ಆನಂದಕಟಾಕ್ಷ, ರೋಷಕಟಾಕ್ಷ ಎಂದು ಹರಿಯ ಕಟಾಕ್ಷವು ಎರಡು ರೀತಿಯದು, ಆನಂದಕಟಾಕ್ಷದಿಂದ ಲೋಕಪುಷ್ಟಿ, ರೋಷದ ಕಟಾಕ್ಷದಿಂದ ಲೋಕವಿನಷ್ಟಿ, ಹರಿಯ ಆನಂದಕಟಾಕ್ಷ ಬಿದ್ದ ಭಕ್ತರಲ್ಲಿ ಲಕ್ಷ್ಮೀಕಟಾಕ್ಷವು ನಿಶ್ಚಿತ. ಅವರು ಅಭ್ಯುದಯ ಮತ್ತು ನಿಶ್ರೇಯಸ (ಮೋಕ್ಷ) ಎರಡನ್ನೂ ಪಡೆಯುತ್ತಾರೆ).

**ಕೃಷ್ಣಾತ್ಮಾನಃ ಸುವಕ್ರಾಃ ವಿಲುಲಿತತಿಲಕಾ ಲೋಕಭರ್ತುಃ ಪರಸ್ತ್ರೀ-**
**ವಕ್ತ್ರಾಮರ್ಶಾದ್ವಿವರ್ಣಾಃ ಗುರುಪಿತುರಲಕಾ ಉತ್ತಮಾಂಗಾಶ್ರಯಾ ನಃ ।**
**ಧ್ಯಾತಾಶ್ಚೇತೋವಿಶುದ್ಧಿಂ ವಿದಧತಿ ತದಿದಂ ನೈವ ಚಿತ್ರಂ ನಮಸ್ತೇ**
**ಚೂಡಾರತ್ನಾಯ ರಮ್ಯದ್ಯುತಿನಿಕರಸಮಾಪೂರಿತಾಶಾಮುಖಾಯ ॥೩೦॥**

**ವ್ಯಾಖ್ಯಾನ:-** ಅಲಕಾನ್ ವರ್ಣಯತಿ - **ಕೃಷ್ಣಾತ್ಮಾನ ಇತಿ ॥** ಕೃಷ್ಣಃ ಶ್ಯಾಮಃ ಆತ್ಮಾ ಸ್ವರೂಪಂ ಯೇಷಾಂ ತೇ, ಸುವಕ್ರಾಃ ಸುಷ್ಠು ವಕ್ರಾಃ ಕುಟಿಲಾಃ ಲೋಕಭರ್ತುಃ ಲೋಕಧಾರಕಸ್ಯ ಶ್ರೀವಿಷ್ಣೋಃ ವಿಲುಲಿತತಿಲಕಾಃ ವಿಲುಲಿತಂ ವಿನಾಶಿತಂ (ಅಸ್ತವ್ಯಸ್ತೀ-ಕೃತಂ) ತಿಲಕಂ ಯೈಃ ತೇ, ತಿಲಕಶಬ್ದಸ್ಯ ಲೋಕಭರ್ತುರಿತ್ಯನೇನ ಸಾಪೇಕ್ಷತ್ವೇಽಪಿ ಪ್ರಧಾನಸ್ಯ ಸಾಪೇಕ್ಷತ್ವಾತ್ ಸಮಾಸಃ । ಪರಸ್ತ್ರೀವಕ್ತ್ರಾಮರ್ಶಾತ್, ಪರಸ್ಯ ಪರಮಾತ್ಮನಃ ಸ್ತ್ರಿಯಃ ಲಕ್ಷ್ಮ್ಯಾಃ ವಕ್ತ್ರಸ್ಯ ಮುಖಸ್ಯ ಆಮರ್ಶಾತ್ ಸಂಬಂಧಾತ್ ವಿವರ್ಣಾಃ ವಿವಿಧ-ವರ್ಣಾಃ, ತಥಾಕೃಷ್ಣಾತ್ಮಾನಃ ಕಲಿಸ್ವರೂಪಾಃ ಶೂದ್ರಸ್ವರೂಪಾ ವಾ, ವ್ಯಾಸಾರ್ಜುನಾಗ್ನಿ-ಹರಿಕೋಕಿಲಕಾಕಶೂದ್ರತಾಮಿಸ್ರಪಕ್ಷಕಲಿನೀಲಗುಣೇಷು ಕೃಷ್ಣಃ ಇತಿರತ್ನಮಾಲಾ, ಅನೇನ ಪಾಪಯುಕ್ತತ್ವರೂಪಾರ್ಥೋ ಗಮ್ಯತೇ । ತಥಾ ಲೋಕಭರ್ತುಃ ವಿಲುಲಿತ ತಿಲಕಾಃ ಇತ್ಯನೇನ ವೃಥಾತಿಲಕಾಪಹಾರಿತ್ವೇನ ಉನ್ಮತ್ತತ್ವಂ ಗಮ್ಯತೇ, ತಥಾ ಪರಸ್ತ್ರೀವಕ್ತ್ರಾಮರ್ಶಾತ್ ಚುಂಬನಾದಿನಾ ಅನ್ಯಸ್ತ್ರೀಮುಖಸಂಬಂಧಾತ್ ವಿವರ್ಣಾಃ ವಿಗತಗುಣಾಃ ವರ್ಣಃ ಸ್ವರ್ಣಕಥಾಕುಥಮತಿಗಣಶೋಭಾಯಶೋವಿಲೇಪೇಷು ಇತಿ-ರತ್ನಮಾಲಾ, ಅನೇನಾಪಿ ಪರಸ್ತ್ರೀಸಂಗೇನ ದೋಷಿತ್ವಂ ಗಮ್ಯತೇ, ಏತಾದೃಶಾ ಅಪಿ **ಗುರುಪಿತುಃ** ಗುರೂಣಾಂ ಬ್ರಹ್ಮಾದೀನಾಂ ಪಿತುಃ ಜನಕಸ್ಯ ವಿಷ್ಣೋಃ **ಅಲಕಾಃ** ಕೇಶಾಃ **ಧ್ಯಾತಾಃ** ಸಂತಃ ನಃ ಅಸ್ಮಾಕಂ **ಚೇತೋವಿಶುದ್ಧಿಂ ವಿದಧತಿ**- ಕುರ್ವಂತಿ, **ತದಿದಂ ನೈವ ಚಿತ್ರಂ** ನಾಶ್ಚರ್ಯಂ ಯತಃ ಅಲಕಾಃ ಕೃಷ್ಣಾತ್ಮತ್ವಾದಿನಾ ದೋಷಿತ್ವೇನ ಪ್ರತೀಯಮಾನಾ ಅಪಿ ಉತ್ತಮಾಂಗಾಶ್ರಯಾಃ ಉತ್ತಮಾಂಗಂ ಮೂರ್ಧೈವ ಆಶ್ರಯಃ ಯೇಷಾಂ ತೇ ತಥಾ, ಕೃಷ್ಣಾತ್ಮತ್ವಕುಟಿಲತ್ವಾದಿದೋಷಯುಕ್ತಾನಾಂ ಅಪಿ ಉತ್ತಮಾಶ್ರಯೇಣ ಅತಿ-ಶುದ್ಧತ್ವಾತ್ ಅನ್ಯೇಷಾಂ ಶುದ್ಧಿದಾನಂ ಯುಕ್ತಮಿತಿ ವ್ಯಂಗ್ಯಾರ್ಥಃ । ಇದಾನೀಂ ಭಗವನ್ಮೂರ್ಧಗತಂ ಚೂಡಾರತ್ನಂ ಸ್ತೌತಿ - **ರಮ್ಯೇತಿ ॥** ರಮ್ಯದ್ಯುತಿನಿಕರಸಮಾ-ಪೂರಿತಾಶಾಮುಖಾಯ ರಮ್ಯದ್ಯುತೀನಾಂ ಮನೋಹರಕಾಂತೀನಾಂ ನಿಕರೇಣ ಸಮೂಹೇನ ಪೂರಿತಾನಿ ಆಶಾಮುಖಾನಿ ದಿಙ್ಮುಖಾನಿ ಯೇನ ತಸ್ಮೈ, ಚೂಡಾ-ರತ್ನಾಯ ತೇ ನಮಃ॥ ೩೦ ॥

**ಅನ್ವಯ:-** ಕೃಷ್ಣಾತ್ಮಾನಃ ಸುವಕ್ರಾಃ, ಲೋಕಭರ್ತುಃ ವಿಲುಲಿತತಿಲಕಾಃ ಪರಸ್ತ್ರೀವಕ್ತ್ರಾಮರ್ಶಾತ್ ವಿವರ್ಣಾಃ ಗುರುಪಿತುಃ ಉತ್ತಮಾಂಗಾಶ್ರಯಾಃ ಅಲಕಾಃ ಧ್ಯಾತಾಃ ನಃ ಚೇತೋವಿಶುದ್ಧಿಂ ವಿದಧತಿ । ತದಿದಂ ನೈವ ಚಿತ್ರಂ, ರಮ್ಯದ್ಯುತಿನಿಕರಸಮಾಪೂರಿತಾಶಾಮುಖಾಯ ಚೂಡಾರತ್ನಾಯ ತೇ ನಮಃ ।

**ಅನ್ವಯಾರ್ಥ:-** **ಕೃಷ್ಣಾತ್ಮಾನಃ** = ಕಲಿಸ್ವರೂಪವಾದುವುಗಳು, ಶೂದ್ರಸ್ವರೂಪವಾದುವುಗಳು, ಕಪ್ಪಾದರೂಪವುಳ್ಳವುಗಳು, (ನಾರಾಯಣಸ್ವರೂಪವಾದುವುಗಳು) **ಸುವಕ್ರಾಃ** = ಬಹಳ ಡೊಂಕಾದ, **ಲೋಕಭರ್ತುಃ** = ಲೋಕಧಾರಕನಾದ ಶ್ರೀವಿಷ್ಣುವಿನ, **ವಿಲುಲಿತತಿಲಕಾಃ** = ತಿಲಕವನ್ನು ಅಸ್ತವ್ಯಸ್ತಮಾಡಿರುವ (ನಾಶಮಾಡಿರುವ), **ಪರವಸ್ತ್ರೀವಕ್ತ್ರಾಮರ್ಶಾತ್** = ಪರಸ್ತ್ರೀಯರ ಚುಂಬನಾದಿ ಮುಖಸಂಬಂಧದಿಂದ, **ವಿವರ್ಣಾಃ** = ಬಣ್ಣಗೆಟ್ಟಿರುವ, ಗುಣವಿಲ್ಲದ, (**ಪರ** = ಸರ್ವೋತ್ತಮನಾದ ಶ್ರೀಹರಿಯ, **ಸ್ತ್ರೀ** = ಹೆಂಡತಿಯಾದ ಲಕ್ಷ್ಮೀದೇವಿಯ, **ವಕ್ತ್ರಾಮರ್ಶಾತ್** = ಮುಖದ ಸಂಬಂಧದಿಂದ ಲಕ್ಷ್ಮೀದೇವಿಯ ಕಟಾಕ್ಷ ಚುಂಬನಾದಿಗಳಿಂದ, **ವಿವರ್ಣಾಃ** = ನಾನಾಬಣ್ಣವುಳ್ಳ), **ಗುರುಪಿತುಃ** = ಬ್ರಹ್ಮಾದಿಗಳ ತಂದೆಯಾದ ಶ್ರೀಹರಿಯ, **ಉತ್ತಮಾಂಗಾಶ್ರಯಾಃ** = ಶಿರಸ್ಸೇ ಆಶ್ರಯವಾಗಿವುಳ್ಳ, **ಅಲಕಾಃ** = ಗುಂಗುರುಕೂದಲುಗಳು, **ಧ್ಯಾತಾಃ** = ಧ್ಯಾನಿಸಲ್ಪಟ್ಟವುಗಳಾಗಿ, **ನಃ** = ನಮ್ಮ, **ಚೇತೋವಿಶುದ್ಧಿಂ** = ಮನಸ್ಸಿಗೆ ಪವಿತ್ರತೆಯನ್ನು, **ವಿದಧತಿ** = ಉಂಟುಮಾಡುತ್ತವೆ. **ತದಿದಂ** = ಅಂತಹ ಈ ಪವಿತ್ರತೆಯನ್ನುಂಟುಮಾಡುವುದು, **ನೈವ ಚಿತ್ರಂ** = ಆಶ್ಚರ್ಯಕರವಲ್ಲವೇ? ಅಲ್ಲ (ಏಕೆಂದರೆ ಆ ಕೂದಲುಗಳು,**ಕೃಷ್ಣಾತ್ಮಾನಃ** = ಕೃಷ್ಣಸ್ವರೂಪವೇ, ಮತ್ತು **ಗುರುಪಿತುಃ ಉತ್ತಮಾಂಗಾಶ್ರಯಾಃ** = ಬ್ರಹ್ಮಾದಿಗಳಿಗೆ ತಂದೆಯಾದ ಹರಿಯ ಉತ್ತಮಾಂಗವಾದ ಶಿರಸ್ಸನ್ನು ಅಶ್ರಯಿಸಿರುವವುಗಳು) **ರಮ್ಯದ್ಯುತಿನಿಕರಸಮಾಪೂರಿತಾಶಾಮುಖಾಯ**, **ರಮ್ಯ** = ಮನೋಹರವಾದ, **ದ್ಯುತಿ** = ಕಾಂತಿಗಳ, **ನಿಕರ** = ಸಮೂಹದಿಂದ, **ಸಮಾಪೂರಿತ** = ತುಂಬಿಸಲ್ಪಟ್ಟ, **ಆಶಾಮುಖಾಯ** = ದಿಕ್ಕುಗಳ ಮುಂಭಾಗವುಳ್ಳ, **ಚೂಡಾರತ್ನಾಯ** = ಶಿರಸ್ಸಿನ ಅಲಂಕಾರ ರತ್ನವಾದ, **ತೇ** = ನಿನಗೆ, **ನಮಃ** = ನಮಸ್ಕಾರ. (**ತಚ್ಚೂಡಾರತ್ನಾಯ** = ಆ ಗುಂಗುರುಕೂದಲುಗಳ ಶಿಖೆಯ ರತ್ನಾಲಂಕಾರಕ್ಕೆ, **ನಮಃ** = ನಮಸ್ಕಾರವು).

**ತಾತ್ಪರ್ಯ–** ಭಗವಂತನ ತಲೆಯ ಮುಂಭಾಗದ ಗುಂಗುರು ಕೂದಲುಗಳು ಕೃಷ್ಣಾತ್ಮವಾಗಿದ್ದರೂ ಕೃಷ್ಣನ ಸ್ವರೂಪವೇ ಆಗಿರುವುವು. ತುಂಬಾ ಗುಂಗುರು ಆಗಿರುತ್ತವೆ. ಲೋಕಾಧಾರನಾದ ಹರಿಯ ಹಣೆಯ ತಿಲಕವನ್ನು ತಮ್ಮ ಸರಿದಾಡುವಿಕೆಯಿಂದ ಅಸ್ತವ್ಯಸ್ತಮಾಡುತ್ತವೆ. ಆ ಗುಂಗುರು ಕೂದಲುಗಳು ಸರ್ವೋತ್ತಮನಾದ ಶ್ರೀಹರಿಯ ಪ್ರಾಣವಲ್ಲಭೆಯಾದ ಲಕ್ಷ್ಮೀದೇವಿಯ ಮುಖಸಂಬಂಧದಿಂದ ನಾನಾ ಗುಣಗಳ ಮತ್ತು ಬಣ್ಣಗಳ ಸಂಬಂಧ ಹೊಂದಿವೆ. ಲಕ್ಷ್ಮೀದೇವಿಯು ತನ್ನ ಕಪ್ಪುಬಿಳುಪು ಕೆಂಪುಮಿಶ್ರಿತವಾದ ಕಟಾಕ್ಷದಿಂದ ನೋಡುವಾಗ ಶ್ರೀಹರಿಯ ಕೂದಲುಗಳೂ ನಾನಾ ಬಣ್ಣದಿಂದ ಕಾಣಸುತ್ತಿವೆ. ಲೋಕಗುರುಗಳಾದ ಬ್ರಹ್ಮಾದಿಗಳಿಗೂ ತಂದೆಯಾದ ಶ್ರೀಹರಿಯ ಉತ್ತಮಾಂಗವಾದ,ಉತ್ತಮಾಂಗವನ್ನು (ಶಿರಸ್ಸನ್ನು) ಆಶ್ರಯಿಸಿರುವ ಈ ಗುಂಗುರುಕೂದಲುಗಳನ್ನು ಧ್ಯಾನಮಾಡಿದರೆ ನಮ್ಮ ಮನಸ್ಸಿಗೆ ಪವಿತ್ರತೆ ಉಂಟಾಗುತ್ತದೆ. ಇದು ಆಶ್ಚರ್ಯಕರವಲ್ಲವೇ? ಅಲ್ಲ. (ಇಲ್ಲಿ ಆಶ್ಚರ್ಯಕ್ಕೆ ವಿಷಯವೇನಿದೆ? ಎಂದು ಶಂಕೆ ಬರಬಹುದು. ಕೃಷ್ಣಾತ್ಮಾನಃ = ಅಂದರೆ ಕಲಿಸ್ವರೂಪ, ಶೂದ್ರಸ್ವರೂಪ, ಕಪ್ಪುಬಣ್ಣದವುಗಳು ಕೂದಲುಗಳು, ತುಂಬಾ ವಕ್ರವಾದುವು, ಲೋಕಾಧಾರನಾದ ಹರಿಯ ತಿಲಕವನ್ನು ನಾಶಮಾಡುವುದರಿಂದ ಹುಚ್ಚರಂತೆ ಕಾಣಸುತ್ತವೆ, ಪರಸ್ತ್ರೀವಕ್ತ್ರಾಮರ್ಶಾತ್ = ಅನ್ಯಸ್ತ್ರೀಯರ ಮುಖಚುಂಬನಾದಿ ಸಂಬಂಧದಿಂದ, ವಿವರ್ಣಾಃ = ಬಣ್ಣಗೆಟ್ಟಿವೆ, ಹೀಗೆಲ್ಲಾ ದೋಷದಿಂದ ಕೂಡಿದಂತೆ ಕಂಡುಬರುತ್ತಿದ್ದರೂ, ಶ್ರೀಹರಿಯ ಉತ್ತಮಾಂಗವನ್ನು (ಶಿರಸ್ಸನ್ನು) ಆಶ್ರಯಿಸಿದ್ದರಿಂದ ಮತ್ತು ಶ್ರೀವಿಷ್ಣುವಿನ ಸ್ವರೂಪವೇ ಆದ್ದರಿಂದ ಧ್ಯಾನ ಮಾಡುವವರಿಗೆ ಮನಸ್ಸಿನಲ್ಲಿ ಪವಿತ್ರತೆಯನ್ನು ಕೊಡುತ್ತವೆ ಎಂದು ವ್ಯಂಗ್ಯಾರ್ಥ)ಈ ಗುಂಗುರು ಕೂದಲುಗಳ ಮೇಲೆ ಶಿರೋರತ್ನವಿದೆ. ಅದು ತನ್ನ ಮನೋಹರವಾದ ಕಾಂತಿಯಿಂದ ದಿಕ್ಕುಗಳ ಮುಖಭಾಗವನ್ನೆಲ್ಲಾ ವ್ಯಾಪಿಸಿದೆ. ಅಂತಹ ಶಿರೋರತ್ನವೇ ! ನಿನಗೆ ನಮಸ್ಕಾರ .

**ಸ್ವಾಂತೇ ಸ್ವಾಂತೇ ವಸಂತ್ಯಾ ವಿಹಿತಕಲಿಮಲೋಪಾರಮಾಯಾ ರಮಾಯಾಃ**
**ಭರ್ತುರ್ಭರ್ತುರ್ಗುಣಾನಾಂ ಸ್ಥಿರತರತರುಣಶ್ರೀಧರಾಯಾ ಧರಾಯಾಃ ।**
**ಸ್ತೋರುಂ ಸ್ತೋರುಂ ಗುರೂಣಾಮಪಿ ಮಮ ಕೃತಸಂಮೋದದಾನೋ ದದಾನೋ**
**ದದ್ಯಾದದ್ಯಾಚ್ಯುತೋ ಮೇ ಸುಮತಿಮಿಹ ಸತಾಂ ಸಂಪ್ರದಾಯಪ್ರದಾಯ ॥೩೦॥**

**ವ್ಯಾಖ್ಯಾನ:-** ಸ್ತುತ್ಯಾ ಪ್ರೀತೋ ಭಗವಾನ್ ಶಿಷ್ಯಾಣಾಂ ಸತ್‌ಸಂಪ್ರದಾತಬೋಧ-ನಾರ್ಥಂ ತತ್ತ್ವಜ್ಞಾನಂ ಬೋಧಯತು ಇತಿ ಪ್ರಾರ್ಥಯತೇ ಸ್ವಾಂತೇ ಸ್ವಾಂತೇ ಇತಿ। **ವಿಹಿತಕಲಿಮಲೋಪಾರಮಾಯಾಃ,** ಕಲಿಪ್ರಯುಕ್ತಂ ಮಲಂ ಪಾಪಂ ಕಲಿಮಲಂ ತಸ್ಯ ಉಪರಮೋ ನಾಶಃ, ಉಪಾಜ್ ಪೂರ್ವಾದ್ರಮೇಃ ಘಞರ್ಥೇ ಕವಿಧಾನಮಿತಿ ಕಪ್ರತ್ಯಯಃ, ವಿಹಿತಃ ಕಲಿಮಲೋಪಾರಮಃ ಯಯಾ ತಸ್ಯಾಃ, **ಗುಣಾನಾಂ** ಜ್ಞಾನಾ-ನಂದಾದ್ಯನಂತಗುಣಾನಾಂ **ಭರ್ತುಃ** ಧಾರಕಸ್ಯ, ನ ಲೋಕಾವ್ಯಯನಿಷ್ಠಾಖಲರ್ಥ-ತೃನಾಂ (೨-೩-೬೯) ಇತಿಕೃದ್ಯೋಗಲಕ್ಷಣಷಷ್ಠ್ಯಾಃ ನಿಷೇಧೇಽಪಿ ಶೇಷಷಷ್ಠ್ಯಾಃ ಅನಿಷೇಧಾತ್ ಶೇಷೇ ಷಷ್ಠೀ। **ಭರ್ತುಃ ಸ್ವಸ್ಯಾಃ ಪತ್ಯುಃ** ಶ್ರೀವಿಷ್ಣೋಃ **ಸ್ವಾಂತೇ ವಸಂತ್ಯಾಃ** ಸ್ವಾ ಸ್ವೀಯಾ (ಅವ್ಯಾ), ಬ್ರಹ್ಮಾದೀನಾಂ ಅನೇಕಸ್ವೋತ್ತಮೋಪೇತತ್ವಾತ್ ಅನೇಕೇಷಾಂ ಶಿಷ್ಯತ್ವಂ, ಮಹಾಲಕ್ಷ್ಮ್ಯಾಸ್ತು ಭಗವಾನ್ ಏಕ ಏವ ಉತ್ತಮ ಇತಿ ಭಗವದೇಕಶಿಷ್ಯತ್ವಂ ಲಕ್ಷ್ಮ್ಯಾಃ ಇತಿಭಾವಃ। ಅಂತೇವಾಸಿಶಬ್ದಸ್ಯ ಶಿಷ್ಯಪರ್ಯಾಯತ್ವಾತ್ ತತ್ಸಮಾನಾರ್ಥ-ಕಾಂತೇವಸಚ್ಛಬ್ದಸ್ಯಾಪಿ ಶಿಷ್ಯಪರ್ಯಾಯತ್ವಂ, ತಥಾ ಭರ್ತುಃ ಸ್ವಾಂತೇ ಮನಸಿ ವಸಂತ್ಯಾಃ ಸರ್ವದಾ ಭರ್ತುರನುಗ್ರಹವಿಷಯತ್ವೇನ ಮನೋವಿಷಯಭೂತಾಯಾಃ ಇತ್ಯರ್ಥಃ। ಸ್ವಾಂತೇ ವಸಂತ್ಯಾಃ ಇತ್ಯತ್ರ ವಿದ್ಯಮಾನವಸಂತೀಶಬ್ದಸ್ಯ ಬುದ್ಧ್ಯಾ ವಿವೇಕೇನ ಪ್ರಥಮೇನ ಸ್ವಾಂತೇ ಇತಿಪದೇನ ಅನ್ವಯೋ ದ್ರಷ್ಟವ್ಯಃ। **ಸ್ಥಿರತರತರುಣಶ್ರೀಧರಾಯಾಃ** ಸ್ಥಿರತರಾ ಅತ್ಯಂತಂ ಸ್ಥಿರಾ ತರುಣಾ ಪ್ರೌಢಾ ಶ್ರೀಃ ಕಾಂತಿಃ ತಾಂ ಧರತೀತಿ ಧರಾ, ತಸ್ಯಾಃ **ಧರಾಯಾಃ ಅಪಿ** ಭೂದೇವ್ಯಾಃ ಅಪಿ, 'ಗುರೂಣಾಮಪಿ' ಇತ್ಯತ್ರ ವಿದ್ಯಮಾನಸ್ಯ ಅಪಿಶಬ್ದಸ್ಯ ಅತ್ರ ಸಂಬಂಧೋ ದ್ರಷ್ಟವ್ಯಃ। **ಸ್ವೋರುಂ** ಸು ಶೋಭನಂ ಆಸಮಂತಾತ್ ಉರುಂ ಉತ್ಕೃಷ್ಟಂ ಸ್ವೋರುಂ ಸ್ವಸ್ಯ ಊರುಂ ಊರುಪ್ರದೇಶಂ **ದದಾನಃ** ಪ್ರಯಚ್ಛನ್ ಊರುಗತಲಕ್ಷ್ಮೀಧರಾಭ್ಯಾಂ ವಿರಾಜಮಾನ ಇತ್ಯರ್ಥಃ। ಯದ್ಯಪಿ ದಾನಕ್ರಿಯೋ-ದ್ದೇಶ್ಯತ್ವೇನ ಕರ್ಮಣಾ ಯಮಭಿಪ್ರೈತೀತಿ ಸ ಸಂಪ್ರದಾನಂ (೧-೪-೩೨) ಇತಿ ಸಂಪ್ರದಾನತ್ವಾತ್ ಚತುರ್ಥ್ಯಾ ಭಾವ್ಯಂ ತಥಾಪಿ ಸಂಪ್ರದಾನತ್ವಾವಿವಕ್ಷಯಾ ಸಂಬಂಧ-ಸಾಮಾನ್ಯವಿವಕ್ಷಯಾ ಷಷ್ಠೀ। **ಮಮ ಗುರೂಣಾಂ** ಶ್ರೀಮದಾನಂದತೀರ್ಥ-ಪ್ರಭೃತೀನಾಂ **ಕೃತಸಮ್ಮೋದದಾನಃ,** ಕೃತಂ ಸಂ ಸಮೀಚೀನಸ್ಯ ದುಃಖಾಸಂಭಿನ್ನಸ್ಯೇತ್ಯರ್ಥಃ ಮೋದಸ್ಯ ಸುಖಸ್ಯ ದಾನಂ ಯೇನ ಸಃ ನಿತ್ಯಸಾಪೇಕ್ಷತ್ವಾತ್ ಸಮಾಸಃ, **ಅಚ್ಯುತಃ** ದೇಶತಃ ಕಾಲತಃ ಗುಣತಶ್ಚ ಚ್ಯುತಿರಹಿತಃ ಶ್ರೀವಿಷ್ಣುಃ **ಸತಾಂ** ಸಜ್ಜನಾನಾಂ **ಸಂಪ್ರದಾಯ-**

ಪ್ರದಾಯ, ಗುರೂಪದೇಶಪರಂಪರಾಪ್ರಾಪ್ತಾ ವಿದ್ಯಾ ಸಂಪ್ರದಾಯಃ, ತಸ್ಯ ಪ್ರದಾಯ ತದುಪದೇಶಕರ್ತ್ರೇ ಮೇ ಮಹ್ಯಂ ಇಹ ಸಂಪ್ರದಾಯೋಪದೇಶವಿಷಯೇ ಅದ್ಯ ಸುಮತಿಂ ಶೋಭನಾಂ ಬುದ್ಧಿಂ ದದ್ಯಾತ್ ಪ್ರಯಚ್ಛತು । ಡುದಾಞ್ ದಾನೇ ಇತ್ಯಸ್ಮಾತ್ ಕರ್ತರಿ ಲಿಙ್ ॥೩೧॥

**ಅನ್ವಯ:-** ವಿಹಿತಕಲಿಮಲೋಪಾರಮಾಯಾಃ, ಗುಣಾನಾಂ ಭರ್ತುಃ ಭರ್ತುಃ ಸ್ವಾಂತೇವಸಂತ್ಯಾಃ ಭರ್ತುಃ ಸ್ವಾಂತೇ ವಸಂತ್ಯಾಃ, ರಮಾಯಾಃ, ಸ್ಥಿರತರತರುಣ-ಶ್ರೀಧರಾಯಾಃ ಧರಾಯಾಃ ಅಪಿ ಸ್ವೋರುಂ ದದಾನಃ ಮಮ ಗುರೂಣಾಂ ಕೃತಸಮ್ಮೋದ-ದಾನಃ ಅಚ್ಯುತಃ ಸತಾಂ ಸಂಪ್ರದಾಯಪ್ರದಾಯ ಮೇ ಇಹ ಅದ್ಯ ಸುಮತಿಂ ದದ್ಯಾತ್ ।

**ಅನ್ವಯಾರ್ಥ–** ವಿಹಿತಕಲಿಮಲೋಪಾರಮಾಯಾಃ, ವಿಹಿತ = ಮಾಡಲ್ಪಟ್ಟ, **ಕಲಿಮಲ** = ಕಲಿಯುಗಪ್ರಯುಕ್ತವಾದ ಪಾಪದ, **ಉಪಾರಮಾಯಾಃ** = ನಾಶವುಳ್ಳ, (ಕಲಿಯಿಂದ ಉಂಟಾದ ಪಾಪವನ್ನು ನಾಶಮಾಡುವ), **ಗುಣಾನಾಂ** = ಜ್ಞಾನ ಆನಂದಾದಿ ಅನಂತಕಲ್ಯಾಣಗುಣಗಳ, **ಭರ್ತುಃ** = ಧಾರಕನಾದ (ಅನಂತ ಕಲ್ಯಾಣಗುಣಪೂರ್ಣ-ನಾದ), **ಭರ್ತುಃ** = ಪತಿಯಾದ ಶ್ರೀಮನ್ನಾರಾಯಣನ, **ಸ್ವಾಂತೇ ವಸಂತ್ಯಾಃ** = ಕೇವಲ ಶಿಷ್ಯಳಾದ (ಇನ್ನೊಬ್ಬರಿಗೆ ಎಂದೂ ಶಿಷ್ಯಳಾಗದಿರುವ), **ಭರ್ತುಃ** =ಪತಿಯಾದ ಶ್ರೀಹರಿಯ, **ಸ್ವಾಂತೇ** =ಮನಸ್ಸಿನಲ್ಲಿ, **ವಸಂತ್ಯಾಃ** =ಯಾವಾಗಲೂ ಅನುಗ್ರಹಪಾತ್ರಳಾಗಿ ವಾಸಮಾಡುತ್ತಿರುವ, **ರಮಾಯಾಃ** = ಪರಮಮಂಗಳದೇವತೆಯಾದ ಮಹಾಲಕ್ಷ್ಮೀ-ದೇವಿಗೂ, **ಸ್ಥಿರತರತರುಣಶ್ರೀಧರಾಯಾಃ**, **ಸ್ಥಿರತರ** = ಅತ್ಯಂತ ಸ್ಥಿರವಾದ, **ತರುಣ** = ಪ್ರೌಢವಾದ, **ಶ್ರೀ** = ಕಾಂತಿಯನ್ನು, **ಧರಾಯಾಃ** = ಧರಿಸಿರುವ, **ಧರಾಯಾಃ ಅಪಿ** = ಭೂದೇವಿಗೂ ಸಹ, **ಸ್ವೋರುಂ** (ಸು+ಆ+ಊರುಂ) = ಮನೋಹರವಾದ ಎಲ್ಲಾ ರೀತಿಯಿಂದಲೂ ಉತ್ಕೃಷ್ಟವಾದ, **ಸ್ವೋರುಂ** = ತನ್ನ ತೊಡೆಯ ಪ್ರದೇಶವನ್ನು, **ದದಾನಃ** = ಕೊಡುತ್ತಿರುವ (ಎಡಬಲ ತೊಡೆಗಳಲ್ಲಿ ಧರಾದೇವಿ ಮತ್ತು ಲಕ್ಷ್ಮೀ ದೇವಿಯರನ್ನು ಕೂಡಿಸಿಕೊಂಡಿರುವ) **ಮಮ** = ನನ್ನ, **ಗುರೂಣಾಂ** = ಗುರುಗಳಾದ ಆನಂದತೀರ್ಥರೇ ಮೊದಲಾದವರಿಗೆ, **ಕೃತಸಮ್ಮೋದದಾನಃ** = ಮಾಡಲ್ಪಟ್ಟ ಅತಿಶಯವಾದ ಆನಂದ-ದಾನವುಳ್ಳ, (ಉತ್ತಮವಾದ ಆನಂದವನ್ನು ಕೊಟ್ಟಿರುವ) **ಅಚ್ಯುತಃ** = ದೇಶಕಾಲ-

ಗಳಿಂದಲೂ, ಗುಣಗಳಿಂದಲೂ ಚ್ಯುತಿರಹಿತನಾದ ಶ್ರೀಮಹಾವಿಷ್ಣುವು , ಸತಾಂ = ಸಜ್ಜನರಿಗೆ, ಸಂಪ್ರದಾಯಪ್ರದಾಯ = ವಿದ್ಯಾಸಂಪ್ರದಾಯವನ್ನು ಉಪದೇಶಿಸುವ, ಮೇ = ನನಗೆ, ಇಹ = ಈದಿನ, ಸುಮತಿಂ = ಉತ್ತಮವಾದ ಬುದ್ಧಿಯನ್ನು, ದದ್ಯಾತ್ = ಕೊಡಲಿ.

**ತಾತ್ಪರ್ಯ** – ನಾನು ಮಾಡಿದ ಈ ಸ್ತುತಿಯಿಂದ ಪ್ರೀತನಾದ ಭಗವಂತನು ಶಿಷ್ಯರಿಗೆ ಸತ್‌ಸಂಪ್ರದಾಯ ಬೋಧಿಸುವ ನನಗೆ ಸಂಪ್ರದಾಯ ಬೋಧನೆಗೆ ಬೇಕಾದ ಜ್ಞಾನವನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತಾರೆ- ಶ್ರೀಲಕ್ಷ್ಮೀದೇವಿಯು ಕಲಿಕಾಲದಿಂದ ಉಂಟಾಗಿರುವ ಪಾಪಗಳನ್ನೆಲ್ಲಾ ನಾಶಪಡಿಸುತ್ತಾಳೆ. ಅವಳು ಜ್ಞಾನಾನಂದಾದಿ ಅನಂತಕಲ್ಯಾಣಗುಣಭರಿತನಾದ ಶ್ರೀಮನ್ನಾರಾಯಣನೊಬ್ಬನಿಗೇ ಶಿಷ್ಯಳಾಗಿದ್ದಾಳೆ. ಶ್ರೀಹರಿಯನ್ನು ಬಿಟ್ಟು ಎಲ್ಲಾ ದೇವತೆಗಳೂ ಶ್ರೀಲಕ್ಷ್ಮೀದೇವಿಯ ಶಿಷ್ಯರೂ ಅವಳಿಂದ ಅನುಗ್ರಹಪಡೆಯುವವರೂ ಆಗಿದ್ದಾರೆ. ಇಂತಹ ಲಕ್ಷ್ಮೀದೇವಿಯು ಪರಮಾತ್ಮನ ಪರಮಾನುಗ್ರಹಪಾತ್ರಳಾಗಿ ಯಾವಾಗಲೂ ಹರಿಯ ಹೃದಯದಲ್ಲಿರುತ್ತಾಳೆ. ಈ ಶ್ರೀಲಕ್ಷ್ಮೀದೇವಿಯನ್ನು ಶ್ರೀಹರಿಯು ಅತ್ಯುತ್ತಮವಾದ ತನ್ನ ತೊಡೆಯ ಮೇಲೆ ಕೂಡಿಸಿಕೊಂಡಿರುತ್ತಾನೆ. ಅತ್ಯಂತ ಸ್ಥಿರವಾದ ಪ್ರೌಢಕಾಂತಿಯಿಂದ ಬೆಳಗುತ್ತಿರುವ ಧರಾದೇವಿಯೂ ಶ್ರೀಹರಿಯ ಮತ್ತೊಂದು ತೊಡೆಯ ಮೇಲೆ ಕುಳಿತಿರುತ್ತಾಳೆ. ಹೀಗೆ ಶ್ರೀಧರೆಯರನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡಿರುವ ಶ್ರೀವಿಷ್ಣುವು ನನ್ನ ಗುರುಗಳಾದ ಶ್ರೀಮಧ್ವಾಚಾರ್ಯರಲ್ಲಿ ಸುಪ್ರಸನ್ನನಾಗಿ ಅವರಿಗೆ ಅತಿಶಯವಾದ ಆನಂದವನ್ನು ಕೊಟ್ಟು, ಅವರನ್ನು ಆನಂದತೀರ್ಥರನ್ನಾಗಿ– ಆನಂದದ ತೀರ್ಥವನ್ನಾಗಿ ಮಾಡಿದ್ದಾನೆ. ನಾನು ಪರಮಾತ್ಮನ ಪ್ರೇರಣೆಯಿಂದ ನನ್ನ ಗುರುಗಳ ಅಪ್ಪಣೆಯಿಂದ ಸಜ್ಜನರಿಗೆ ಸಂಪ್ರದಾಯೋಪದೇಶವನ್ನು ಮಾಡುತ್ತಿದ್ದೇನೆ. ನನ್ನ ಈ ಸ್ತುತಿಯಿಂದ ಸುಪ್ರೀತನಾದ ಶ್ರೀವಿಷ್ಣುವು ಸಂಪ್ರದಾಯೋಪದೇಶಕ್ಕೆ ಬೇಕಾಗುವ ತತ್ತ್ವಜ್ಞಾನವನ್ನು ನನಗೆ ಕರುಣಿಸಲಿ.

**ಪೂರ್ಣಪ್ರಜ್ಞಸ್ಯ ಸಾಕ್ಷಾದಪಿ ನಿಜಗುಣತಃ ಶ್ರೀಮದಾನಂದತೀರ್ಥ–**

**ಪ್ರಾಜ್ಞಾಚಾರ್ಯಸ್ಯ ಶಿಷ್ಯಃ ಸ್ತವಮಿತಿಕೃತವಾನ್ ತತ್‌ಪ್ರಸಾದಾವಲಂಬಾತ್ ।**

**ತೇನ ತ್ರೈವಿಕ್ರಮೇಣ ಪ್ರಣಿಹಿತಕರಣಃ ಸ್ತೌತಿ ಯಸ್ತಂ ಸುಭಕ್ತ-**
**ಸ್ತಸ್ಮೈ ಸ್ವಾಮೀ ರಮೇಶಃ ಪ್ರದಿಶತು ವಿಶದಾಂ ದೃಷ್ಟಿಮಿಷ್ಟಾಂ ಚ ಮುಕ್ತಿಮ್ ॥೩೨॥**

**ವ್ಯಾಖ್ಯಾನ** – ಪ್ರಕಾಶಯೇದ್ಗುರುಂ ನಿತ್ಯಂ ಮಂತ್ರಂ ಯತ್ನೇನ ಗೋಪಯೇತ್ ಇತ್ಯಾದಿ ವಚನಬಲಾತ್ ಗುರುಖ್ಯಾಪನಸ್ಯ ಮಹಾಫಲಹೇತುತ್ವಾತ್ ಸ್ವಗುರುಖ್ಯಾಪನಪೂರ್ವಕಂ ಸ್ವನಾಮ ಖ್ಯಾಪಯನ್ ಸ್ವಕೃತಸ್ತೋತ್ರಸ್ಯ ಇಷ್ಟಫಲಪ್ರದತ್ವಂ ಪ್ರಾರ್ಥಯತೇ-ಪೂರ್ಣಪ್ರಜ್ಞಸ್ಯೇತಿ ॥ ಸಾಕ್ಷಾತ್ ಅಪಿ ಮುಖ್ಯತ್ವೇನ ನಿಜಗುಣತಃ ಪೂರ್ಣಪ್ರಜ್ಞಸ್ಯ ಪೂರ್ಣಪ್ರಜ್ಞನಾಮವಾಚ್ಯಸ್ಯ ಸ್ವಾಭಾವಿಕಗುಣೇಭ್ಯಃ ಹೇತೋಃ ಪೂರ್ಣಪ್ರಜ್ಞಸ್ಯ ಪೂರ್ಣಪ್ರಜ್ಞನಾಮಕಸ್ಯ, ಪೂರ್ಣಪ್ರಜ್ಞ ಇತಿ ಶ್ರೀಮದಾಚಾರ್ಯಾಣಾಂ ನಾಮ ನಾಶ್ವ-ಕರ್ಣಾದಿವತ್ ಕೇವಲಂ ರೂಢಂ ಕಿಂತು ತಚ್ಛಬ್ದವಾಚ್ಯಸ್ಯ ಪರಿಪೂರ್ಣಜ್ಞಾನಸ್ಯ ಮುಖ್ಯತಃ ಸತ್ವಾತ್ ಯೌಗಿಕಮಿತ್ಯುಕ್ತಂ ಭವತಿ, ರುದ್ರಾದಿಷ್ವಪಿ ಇಂದ್ರಾದ್ಯಪೇಕ್ಷಯಾ ಪೂರ್ಣಜ್ಞಾನಾದೇಃ ಸತ್ತ್ವಾತ್ ತತ್ರಾಪಿ ಪೂರ್ಣಪ್ರಜ್ಞಾದಿನಾಮ ಯೌಗಿಕಂ ಸ್ಯಾದ-ತಸ್ತದ್ ವ್ಯಾವೃತ್ತ್ಯರ್ಥಂ ಸಾಕ್ಷಾದಿತ್ಯುಕ್ತಂ ॥ ರುದ್ರಾದೌ ಯತ್ಕಿಂಚಿಜ್ಜೀವಾಪೇಕ್ಷಯಾ ಪೂರ್ಣಜ್ಞಾನಾದಿಕಂ, ಶ್ರೀಮದಾಚಾರ್ಯೇಷು ತು ಸರ್ವಜೀವಾಪೇಕ್ಷಯಾ ಪೂರ್ಣ-ಜ್ಞಾನಾದೇಃ ಸತ್ತ್ವಾತ್ ಪೂರ್ಣಪ್ರಜ್ಞೇತಿ ನಾಮ ತತ್ರ ಮುಖ್ಯತೋ ಯೌಗಿಕಮಿತ್ಯಾ-ಶಯಃ । ತಥಾ ಸಾಕ್ಷಾತ್ ಮುಖ್ಯತಃ ನಿಜಗುಣತಃ ಶ್ರೀಮದಾನಂದತೀರ್ಥಪ್ರಾಜ್ಞಾ-ಚಾರ್ಯನಾಮವಾಚ್ಯಗುಣೇಭ್ಯಃ ಹೇತೋಃ, ಶ್ರೀಮದಾನಂದತೀರ್ಥಪ್ರಾಜ್ಞಾ-ಚಾರ್ಯಸ್ಯಾಪಿ, ಆನಂದಯತೀತ್ಯಾನಂದಂ, ತೀರ್ಥಂ ಶಾಸ್ತ್ರಂ ಯಸ್ಯ ಸಃ ಆನಂದ-ತೀರ್ಥಃ, ಪ್ರಕರ್ಷೇಣ ಜಾನಾತೀತಿ ಪ್ರಜ್ಞಃ, ಪ್ರಜ್ಞಃ ಏವ ಪ್ರಾಜ್ಞಃ, ರುದ್ರಾದಿಭಿಃ ಆಚರಿತುಂ ಸೇವಿತುಂ ಯೋಗ್ಯತ್ವಾತ್ ಆಚಾರ್ಯಃ, ಪ್ರಾಜ್ಞಶ್ಚಾಸೌ ಆಚಾರ್ಯಶ್ಚ ಪ್ರಾಜ್ಞಾಚಾರ್ಯಃ, ಶ್ರೀಮದಾನಂದತೀರ್ಥ ಏವ ಪ್ರಾಜ್ಞಾಚಾರ್ಯಃ, ತಸ್ಯ, ಏವಂ ಶ್ರೀಮದಾನಂದತೀರ್ಥಪ್ರಾಜ್ಞಾಚಾರ್ಯ ಇತ್ಯಪಿ ನಾಮ ತತ್ರ ಮುಖ್ಯತಯಾ ಯೌಗಿಕ-ಮಿತ್ಯಾಶಯಃ । ತಸ್ಯ ಶಿಷ್ಯಃ, ತತ್ಪ್ರಸಾದಾವಲಂಬಾತ್ ಶ್ರೀಮದಾನಂದತೀರ್ಥಪ್ರಾಜ್ಞಾ-ಚಾರ್ಯಪ್ರಸಾದಾಶ್ರಯಾತ್, ಸ್ತವಂ ಶ್ರೀವಿಷ್ಣುಸ್ತುತಿಂ ಇತಿ ಪೂರ್ವೋಕ್ತಪ್ರಕಾರೇಣ ಕೃತವಾನ್ । ತ್ರೈವಿಕ್ರಮೇಣ ತ್ರಿವಿಕ್ರಮಾಚಾರ್ಯಕೃತೇನ ತೇನ ಶ್ರೀವಿಷ್ಣುಸ್ತವೇನ ಸುಭಕ್ತಃ ಅತ್ಯಂತಭಕ್ತಿಮಾನ್, ಪ್ರಣಿಹಿತಾನಿ ಶ್ರೀವಿಷ್ಣೌ ಸ್ಥಾಪಿತಾನಿ ಕರಣಃ ಕರಣಾನಿ

ಮನಆದೀಂದ್ರಿಯಾಣಿ ಯೇನ ತಾದೃಶಃ ಸನ್ ಯಃ ಪುರುಷಃ ತಂ ಶ್ರೀವಿಷ್ಣುಂ ಸ್ತೌತಿ, ಸ್ವಾಮೀ ಸಕಲಜಗನ್ನಾಥಃ ರಮೇಶಃ ಲಕ್ಷ್ಮೀಪತಿಃ, ಯದ್ಯಪಿ ಸ್ವಾಮೀತ್ಯನೇನೈವ ಲಕ್ಷ್ಮೀ-ಸ್ವಾಮಿತ್ವಮಪ್ಯುಕ್ತಂ, ತಥಾಪಿ ಸ್ತುತ್ಯಂತೇ ಸಕಲವಾಙ್ಮನಸದೇವತಾತ್ವೇನ ಲಕ್ಷ್ಮೀಪ್ರಾರ್ಥನ-ಸ್ಯಾಪಿ ಆವಶ್ಯಕತ್ವಾತ್ ಪಾರ್ಥಕ್ಯೇನ ಪ್ರಾರ್ಥನಸ್ಯ ನಿಷಿದ್ಧತ್ವಾತ್ ಪುನಃ ಲಕ್ಷ್ಮೀಪತಿಃ ಇತಿ ವಿಶೇಷತಃ ಉಕ್ತಂ, ತಸ್ಮೈ ಸ್ತುತಿಕರ್ತ್ರೇ ವಿಶದಾಂ ನಿರ್ಮಲಾಂ ದೃಷ್ಟಿಂ ಜ್ಞಾನಂ ತಥಾ ಇಷ್ಟಾಂ ಯಸ್ಯ ಯಸ್ಯ ಯಾ ಯಾ ಅಪೇಕ್ಷಿತಾ ತಾಂ ತಾಂ, ಮುಕ್ತಿಂ ಮೋಕ್ಷಂ ಚ ಪ್ರದಿಶತು ದದಾತು । ಅನೇನ ಮುಕ್ತೇರಿಷ್ಟತ್ವಾವ್ಯಭಿಚಾರಾತ್ ಇಷ್ಟಾಮಿತಿವಿಶೇಷಣಂ ವ್ಯರ್ಥಮಿತಿ ಚೋದ್ಯಾನವಕಾಶಃ । ಕಸ್ಯಚಿದಪಾಯಾನ್ಮುಕ್ತಿಃ ಅಪೇಕ್ಷಿತಾ, ಕಸ್ಯಚಿದ-ನಪತ್ಯತ್ವಾನ್ಮುಕ್ತಿಃ, ಕಸ್ಯಚಿದಜ್ಞಾನಾನ್ಮುಕ್ತಿಃ, ಕಸ್ಯಚಿತ್ ಪ್ರಕೃತಿಬಂಧಾನ್ಮುಕ್ತಿಃ ಇತ್ಯಾದಿ-ರೂಪಾ ಯಸ್ಯ ಯಸ್ಯ ಯಾ ಯಾ ಅಪೇಕ್ಷಿತಾ ತಾಂ ತಾಂ ಮುಕ್ತಿಂ ದದಾತೀತಿ ವಕ್ತುಂ ಇಷ್ಟಾಮಿತಿ ವಿಶೇಷಣಸ್ಯ ಸಾರ್ಥಕತ್ವಾತ್ ॥೩೨॥

**ಅನ್ವಯ:-** ಸಾಕ್ಷಾದಪಿ ನಿಜಗುಣತಃ ಪೂರ್ಣಪ್ರಜ್ಞಸ್ಯ (ತಥಾ), ಸಾಕ್ಷಾದಪಿ ನಿಜ-ಗುಣತಃ ಶ್ರೀಮದಾನಂದತೀರ್ಥಪ್ರಾಜ್ಞಾಚಾರ್ಯಸ್ಯ ಶಿಷ್ಯಃ ತತ್ಪ್ರಸಾದಾವಲಂಬಾತ್ ಸ್ತವಂ ಇತಿ ಕೃತವಾನ್ । ತ್ರೈವಿಕ್ರಮೇಣ ತೇನ ಸುಭಕ್ತಃ ಪ್ರಣಿಹಿತಕರಣಃ ಸನ್ ಯಃ ತಂ ಸ್ತೌತಿ ಸ್ವಾಮೀ ರಮೇಶಃ ತಸ್ಮೈ ವಿಶದಾಂ ದೃಷ್ಟಿಂ ಇಷ್ಟಾಂ ಮುಕ್ತಿಂ ಚ ಪ್ರದಿಶತು ॥

**ಅನ್ವಯಾರ್ಥ – ಸಾಕ್ಷಾದಪಿ** = ಮುಖ್ಯವಾಗಿಯೂ, **ನಿಜಗುಣತಃ** = ಪೂರ್ಣಪ್ರಜ್ಞ ಎಂಬ ಹೆಸರಿನ ಅರ್ಥವಾಗಿರುವ ಸ್ವಾಭಾವಿಕವಾದ ಸರ್ವವಿಷಯಕಜ್ಞಾನಗುಣಗಳಿಂದ (ತಥಾ = ಹಾಗೆಯೇ) (ಸಾಕ್ಷಾದಪಿ, ನಿಜಗುಣತಃ = ಮುಖ್ಯವಾಗಿ ಶ್ರೀಮದಾನಂದ-ತೀರ್ಥಪ್ರಾಜ್ಞಾಚಾರ್ಯ ಎಂಬ ಹೆಸರಿನ ಅರ್ಥವಾಗಿರುವ ಗುಣಗಳಿಂದಲೂ) ಶ್ರೀಮದಾ-ನಂದತೀರ್ಥಪ್ರಾಜ್ಞಾಚಾರ್ಯಸ್ಯ, ಶ್ರೀಮತ್ = ಕಾಂತಿಯುಕ್ತರಾದ, ಆನಂದತೀರ್ಥ = ಆನಂದಕರವಾದ ಶಾಸ್ತ್ರವುಳ್ಳ, ಪ್ರಾಜ್ಞ = ಪ್ರಕೃಷ್ಟವಾದ ಜ್ಞಾನವುಳ್ಳ, ಆಚಾರ್ಯಸ್ಯ =ರುದ್ರಾದಿಗಳಿಂದ ಸೇವ್ಯರಾದ (ಶ್ರೀಮಧ್ವಾಚಾರ್ಯರ), ಶಿಷ್ಯಃ = ಶಿಷ್ಯನಾದ ನಾನು, ತತ್ಪ್ರಸಾದಾವಲಂಬಾತ್ = ಶ್ರೀಮದಾನಂದತೀರ್ಥಪ್ರಾಜ್ಞಾಚಾರ್ಯರ ಅನುಗ್ರಹದ ಆಶ್ರಯದಿಂದ, ಸ್ತವಂ = ಶ್ರೀವಿಷ್ಣುಸ್ತುತಿಯನ್ನು, ಇತಿ = ಈ ರೀತಿಯಾಗಿ, ಕೃತವಾನ್ = ಮಾಡಿದೆನು. ತ್ರೈವಿಕ್ರಮೇಣ = ತ್ರಿವಿಕ್ರಮಪಂಡಿತಾಚಾರ್ಯಕೃತವಾದ, ತೇನ = ಆ

ಸ್ತೋತ್ರದಿಂದ, **ಸುಭಕ್ತಃ** = ಅತ್ಯಂತ ಭಕ್ತಿಭರಿತನಾದ, **ಪ್ರಣಿಹಿತ** = ಶ್ರೀಹರಿಯಲ್ಲಿ ಸ್ಥಾಪಿಸಲ್ಪಟ್ಟ, **ಕರಣಃ (ಸನ್)** = ಮನಸ್ಸು ಮೊದಲಾದ ಇಂದ್ರಿಯಗಳುಳ್ಳವನಾಗಿ, **ಯಃ** = ಯಾವನು, **ತಂ** = ಆ ವಿಷ್ಣುವನ್ನು, **ಸ್ತೌತಿ** = ಸ್ತುತಿಸುತ್ತಾನೋ, **ಸ್ವಾಮೀ** = ಸಕಲ-ಜಗದೊಡೆಯನಾದ, **ರಮೇಶಃ** = ಲಕ್ಷ್ಮೀಪತಿಯಾದ ಶ್ರೀವಿಷ್ಣುವು, **ತಸ್ಮೈ** = ಸ್ತುತಿಮಾಡು-ವವನಿಗೆ, **ವಿಶದಾಂ** = ಸ್ಪಷ್ಟವಾದ, **ದೃಷ್ಟಿಂ** = ಜ್ಞಾನವನ್ನು, **ಇಷ್ಟಾಂ** = ಅಪೇಕ್ಷಿತವಾದ, **ಮುಕ್ತಿಂ ಚ** = ಮೋಕ್ಷವನ್ನೂ, **ಪ್ರದಿಶತು** =ಕೊಡಲಿ.

**ತಾತ್ಪರ್ಯ:-** 'ಯೋಗ್ಯನಾದ ಶಿಷ್ಯನು ತನ್ನ ಗುರುಗಳ ಹೆಸರನ್ನೂ ಅವರ ಕೀರ್ತಿಯನ್ನೂ ಪ್ರಕಾಶಗೊಳಿಸಬೇಕು. ಅವರು ಹೇಳಿಕೊಟ್ಟಿರುವ ಮಂತ್ರವನ್ನು ಮಾತ್ರ ರಹಸ್ಯವಾಗಿಟ್ಟಿರಬೇಕು.' ಇತ್ಯಾದಿ ವಚನಗಳಿಂದ ಗುರುಗಳ ಹೆಸರನ್ನು ಪ್ರಕಾಶಪಡಿಸುವುದು ಮಹತ್ತಾದ ಫಲಕ್ಕೆ ಕಾರಣವಾದುದರಿಂದ, ತನ್ನ ಗುರುಗಳ ಹೆಸರನ್ನೂ, ತನ್ನ ಹೆಸರನ್ನೂ ಪ್ರಕಟಗೊಳಿಸುತ್ತಾ ತಾನು ಮಾಡಿರುವ ಸ್ತುತಿಯು ಇಷ್ಟಫಲವನ್ನು ಕೊಡಲಿ ಎಂದು ಈ ಶ್ಲೋಕದಿಂದ ಪ್ರಾರ್ಥಿಸುತ್ತಾರೆ.

ನನ್ನ ಗುರುಗಳಿಗೆ ಶ್ರೀಪೂರ್ಣಪ್ರಜ್ಞ ಎಂದು ಹೆಸರು. ಸ್ವಾಭಾವಿಕವಾದ ಎಲ್ಲಾ ವಿಷಯದಲ್ಲಿಯೂ ಪೂರ್ಣವಾದ ಜ್ಞಾನವುಳ್ಳವರು ಎಂಬ ಆ ಹೆಸರಿನ ಅರ್ಥವು ಅವರಲ್ಲಿ ಪೂರ್ಣವಾಗಿ ಒಪ್ಪುತ್ತದೆ. ಆ ನನ್ನ ಗುರುಗಳಿಗೆ ಶ್ರೀಮದಾನಂದತೀರ್ಥಪ್ರಾಜ್ಞಾಚಾರ್ಯ-ರೆಂದೂ ಹೆಸರು. 'ಕಾಂತಿಯುಕ್ತರಾಗಿ, ಆನಂದಕರವಾದ ಮೋಕ್ಷವನ್ನು ಕೊಡುವ ಶಾಸ್ತ್ರವನ್ನು ರಚಿಸಿ, ಉತ್ಕೃಷ್ಟಜ್ಞಾನವುಳ್ಳವರಾಗಿ, ರುದ್ರಾದಿಗಳಿಂದಲೂ ಸೇವಿಸಲು ಯೋಗ್ಯರಾಗಿ-ರುವುದರಿಂದ' ಅಂತಹ ಶ್ರೀಮತ್, ಆನಂದತೀರ್ಥ, ಪ್ರಾಜ್ಞ, ಆಚಾರ್ಯರೆಂಬ ಹೆಸರೂ ಅವರಿಗೇ ಮುಖ್ಯವಾಗಿ ಒಪ್ಪುತ್ತದೆ. ಅವರ ಶಿಷ್ಯನಾದ 'ತ್ರಿವಿಕ್ರಮ'ನೆಂಬ ನಾನು ಅವರ ಅನುಗ್ರಹದ ಬಲದಿಂದಲೇ ಈ ವಿಷ್ಣುಸ್ತುತಿಯನ್ನು ಈ ರೀತಿಯಾಗಿ ಮಾಡಿದ್ದೇನೆ. ತ್ರಿವಿಕ್ರಮಪಂಡಿತಾಚಾರ್ಯನೆಂಬ ಹೆಸರಿನ ನಾನು ಮಾಡಿರುವ ಈ ಸ್ತೋತ್ರವನ್ನು ಶ್ರೀವಿಷ್ಣುವಿನಲ್ಲಿಯೇ ಮನಸ್ಸು ಮೊದಲಾದ ಸರ್ವೇಂದ್ರಿಯಗಳನ್ನೂ ನೆಟ್ಟು ಯಾವನು ಅತ್ಯಂತ ಭಕ್ತಿಭಾವದಿಂದ ಪಠಿಸುತ್ತಾನೋ ಅಂತಹವನಿಗೆ ಜಗದೊಡೆಯನಾದ, ಲಕ್ಷ್ಮೀ-ವಲ್ಲಭನಾದ ಶ್ರೀವಿಷ್ಣುವು ಪ್ರಸನ್ನನಾಗಿ, ನಿರ್ಮಲವಾದ ಜ್ಞಾನದೃಷ್ಟಿಯನ್ನು ಕರುಣಿಸಲಿ. ಮುಕ್ತಿಯು (ಬಿಡುಗಡೆಯು) ಆಪತ್ತಿನಿಂದ ಮುಕ್ತಿ, ಮಕ್ಕಳಿಲ್ಲವೆಂಬ ಚಿಂತೆಯಿಂದಮುಕ್ತಿ,

ಅಜ್ಞಾನದಿಂದ ಮುಕ್ತಿ, ಪ್ರಕೃತಿಬಂಧನದಿಂದ ಮುಕ್ತಿ ಇತ್ಯಾದಿಯಾಗಿ ಅನೇಕವಾಗಿದೆ. ಆ ಮುಕ್ತಿಗಳಲ್ಲಿ ಯಾರು ಯಾರಿಗೆ ಯಾವ ಯಾವ ವಿಧವಾದ ಮುಕ್ತಿಯು ಅಪೇಕ್ಷಿತ-ವಾಗಿದೆಯೋ ಅದನ್ನು ಕರುಣಿಸಲಿ ಎಂದು ಪ್ರಾರ್ಥಿಸಿದ್ದಾರೆ. (ಎಲ್ಲಾ ಅನಿಷ್ಟಗಳ ನಿವೃತ್ತಿ-ಯಾಗಿ ಸ್ವಸ್ವರೂಪಾನಂದಾವಿರ್ಭಾವ ಆಗುವುದೇ ಮುಕ್ತಿಯು. ಇದು ಎಲ್ಲರಿಗೂ ಇಷ್ಟವೇ ಆಗಿರುವುದರಿಂದ ಅದಕ್ಕೆ 'ಇಷ್ಟಾಂ' ಎಂಬ ವಿಶೇಷಣವನ್ನು ಕೊಟ್ಟಿರುವುದರಿಂದ 'ಇಷ್ಟಾಂ ಮುಕ್ತಿಂ' ಎಂಬುದಕ್ಕೆ ಈ ಅಭಿಪ್ರಾಯವನ್ನು ಹೇಳಬೇಕು).

**ಪುಣ್ಯೈಃ ಪೂರ್ಣತಮಃ ಪುರಾಣಪುರುಷಃ ಸಜ್ಜ್ಞಾನಸೌಖ್ಯಾದಿಭಿ-**
**ರ್ದೇವೋ ದಿವ್ಯತನುರ್ನಿಜೇ ವರಪದೇ ಪದ್ಮಾನುರಾಗಾಸ್ಪದೇ ।**
**ಸ್ವಾನಂದೋರುಪುರೇ ಪುರಂದರಹರಬ್ರಹ್ಮಾದಿಭಿಃ ಪೂರ್ವಜೈಃ**
**ಪೂಜ್ಯಃ ಪೂಜ್ಯತಮೋ ವಸನ್ನಸುಲಭಾಂ ಭಕ್ತಿಂ ಪ್ರದದ್ಯಾನ್ಮಮ ॥**[redacted]

**ವ್ಯಾಖ್ಯಾನ:-** ನನು ಶ್ರೀವಿಷ್ಣೋಃ ಶರೀರತ್ವೇನ ದುಃಖಾದಿಸಂಭವಾತ್ ನೇಷ್ಟದಾತೃತ್ವಂ ಸಂಭವತೀತಿ ಶಂಕಾಂ ಪರಿಹರನ್, ಭಕ್ತೇಃ ಪರಮಪುರುಷಾರ್ಥತ್ವಸಾಧನಾತ್ ತಾಂ ಪ್ರಾರ್ಥಯಮಾನಃ ಸ್ತುತಿಂ ಸಮಾಪಯತಿ **ಪುಣ್ಯೈರಿತಿ** ॥ ಪುಣ್ಯೈಃ ಸ್ಮರಣಾದಿನಾ ಪುಣ್ಯಕಾರಣೈಃ 'ನಡ್ವಲೋದಕಂ ಪಾದರೋಗಃ' ಇತ್ಯಾದಿವತ್ ಕಾರ್ಯವಾಚಕಶಬ್ದಸ್ಯ ಕಾರಣೇ ಪ್ರಯೋಗಃ । ಸಜ್ಜ್ಞಾನಸೌಖ್ಯಾದಿಭಿಃ ನಿರ್ದುಷ್ಟಜ್ಞಾನಾನಂದಾದಿಭಿಃ ಪೂರ್ಣತಮಃ ಅತಿಶಯೇನ ಪೂರ್ಣಃ ದೇವಃ ಕ್ರೀಡಾದಿಗುಣವಿಶಿಷ್ಟಃ ದಿವ್ಯತನುಃ ಪ್ರಕಾಶಮಾನಶರೀರಃ ನಿಜೇ ಸ್ವಾಭಾವಿಕೇ ಪದ್ಮಾನುರಾಗಾಸ್ಪದೇ ಮಹಾಲಕ್ಷ್ಮೀಸ್ನೇಹ-ವಿಷಯೇ ವರಪದೇ ಉತ್ತಮಸ್ಥಾನರೂಪೇ ಪೂರ್ವಜೈಃ ಸೃಷ್ಟ್ಯಾದೌ ಉತ್ಪನ್ನೈಃ ಪುರಂದರಹರಬ್ರಹ್ಮಾದಿಭಿಃ ಇಂದ್ರರುದ್ರಬ್ರಹ್ಮಾದಿಭಿಃ ಸುರೈಃ ಪೂಜ್ಯಃ, ಯದ್ಯಪಿ ಅಭ್ಯರ್ಹಿತತ್ವಾತ್ ಬ್ರಹ್ಮಶಬ್ದಸ್ಯ ಪೂರ್ವನಿಪಾತೇನ ಭಾವ್ಯಂ ತಥಾಪಿ ಧರ್ಮಾದಿಷ್ವ-ನಿಯಮಃ ಇತಿವಚನಾತ್ ತಸ್ಯ ಚ ಆಕೃತಿಗಣತ್ವಾತ್ ಪುರಂದರಶಬ್ದಸ್ಯ ಪೂರ್ವನಿಪಾತಃ, ಸ್ವಾನಂದೋರುಪುರೇ, ಸ್ವಸ್ವರೂಪಭೂತೇ ಆನಂದೇ ಆನಂದಾತ್ಮಕೇ, ಉಪಲಕ್ಷಣ-ಮೇತತ್, ಸರ್ವಗುಣಾತ್ಮಕೇ ಇತ್ಯರ್ಥಃ, ಉರುಪುರೇ ಉತ್ಕೃಷ್ಟಶರೀರೇ 'ಗೃಹೇ ಪರಿಗ್ರಹೇ ದೇಹೇ ನಗರೇ ಚ ಪುರಂ ಪುರೀ, ಇತಿರತ್ನಮಾಲಾ, ವಸನ್, ಅನೇನ ಹರೇರ-ನನ್ಯಾಧಾರತ್ವಮುಕ್ತಂ ಪೂಜ್ಯತಮಃ ಅತಿಶಯೇನಪೂಜ್ಯಃ ಪುರಾಣಪುರುಷಃ ಪುರಾ-

ತನಪುರುಷಃ ಶ್ರೀವಿಷ್ಣುಃ ಅಸುಲಭಾಂ ಅಯೋಗ್ಯಜನೈರಪ್ರಾಪ್ಯಾಂ ಭಕ್ತಿಂ ಮಮ ಪ್ರದದ್ಯಾತ್ । ಶ್ರೀವಿಷ್ಣುಶರೀರಸ್ಯ ಸ್ವರೂಪಭೂತಾಪರಿಮಿತಾನಂದಾತ್ಮಕತ್ವೇನ ದುಃಖಾದ್ಯಸಂಭವಾತ್ ಸರ್ವೇಷಾಂ (ಇಷ್ಟ)ದಾತೃತ್ವಂ ಸಂಭವತೀತಿ ಭಾವಃ । ವೃತ್ತಂ ತು ಶಾರ್ದೂಲವಿಕ್ರೀಡಿತಮ್ । ಸೂರ್ಯಾಶ್ವೈರ್ಮಸಜಾಸ್ತತಾಃ ಸಗುರವಃ ಶಾರ್ದೂಲವಿಕ್ರೀಡಿತಂ ಇತಿಲಕ್ಷಣಾತ್ । ಯದ್ಯಪೀದಂ ಪದ್ಯಂ ಪೂರ್ವಟೀಕಾಕಾರೈರ್ನವ್ಯಾಖ್ಯಾತಂ ತಥಾಪಿ ಸರ್ವೈಃ ಪಠ್ಯಮಾನತ್ವಾದಸ್ಮಾಭಿರ್ವ್ಯಾಖ್ಯಾತಮ್ ।

ಕೃತಾ ವರದರಾಜೇನ ಟೀಕಾ ವಿಷ್ಣುಸ್ತುತೇರಿಯಮ್ ।
ಭೂಯಾದ್ಗುರುಸ್ವಾಂತಗತಮಧ್ವೇಶಶ್ರೀಶತುಷ್ಟಯೇ ॥

ಇತಿ ಶ್ರೀಮತ್ಕವಿಕುಲತಿಲಕತ್ರಿವಿಕ್ರಮಪಂಡಿತಾಚಾರ್ಯವಿರಚಿತಾಯಾಃ
ವಿಷ್ಣುಸ್ತುತೇಃ ಟೀಕಾ ವರದರಾಜಾಚಾರ್ಯಕೃತಾ ಸಮಾಪ್ತಾ ॥

॥ಶ್ರೀಕೃಷ್ಣಾರ್ಪಣಮಸ್ತು॥

**ಅನ್ವಯ –** ಪುಣ್ಯೈಃ ಸಜ್ಜ್ಞಾನಸೌಖ್ಯಾದಿಭಿಃ ಪೂರ್ಣತಮಃ, ದೇವಃ, ದಿವ್ಯತನುಃ, ನಿಜೇ ಪದ್ಮಾನುರಾಗಾಸ್ಪದೇ ವರಪದೇ ಪೂರ್ವಜೈಃ ಪುರಂದರಹರಬ್ರಹ್ಮಾದಿಭಿಃ ಪೂಜ್ಯಃ, ಸ್ವಾನಂದೋರುಪುರೇ ವಸನ್ ಪೂಜ್ಯತಮಃ ಪುರಾಣಪುರುಷಃ ಅಸುಲಭಾಂ ಭಕ್ತಿಂ ಮಮ ಪ್ರದದ್ಯಾತ್ ।

**ಅನ್ವಯಾರ್ಥ –** ಪುಣ್ಯೈಃ = ಪುಣ್ಯಕರಗಳಾದ, ಸಜ್ಜ್ಞಾನಸೌಖ್ಯಾದಿಭಿಃ = ನಿರ್ದೋಷವಾದ ಜ್ಞಾನಆನಂದಾದಿಗಳಿಂದ, ಪೂರ್ಣತಮಃ = ಅತಿಶಯವಾಗಿ ತುಂಬಿದ, ದೇವಃ = ಕ್ರೀಡಾದಿಗುಣವಿಶಿಷ್ಟನಾದ, ದಿವ್ಯತನುಃ = ಪ್ರಕಾಶಮಾನವಾದ ಶರೀರವುಳ್ಳ, ನಿಜೇ = ಸ್ವಾಭಾವಿಕವಾದ, ಪದ್ಮಾನುರಾಗಾಸ್ಪದೇ = ಮಹಾಲಕ್ಷ್ಮೀದೇವಿಗೆ ಪ್ರೀತಿವಿಷಯವಾದ, ವರಪದೇ = ಉತ್ತಮಸ್ಥಾನದಲ್ಲಿ, ಪೂರ್ವಜೈಃ = ಸೃಷ್ಟಿಯ ಆದಿಯಲ್ಲಿ ಉತ್ಪನ್ನರಾದ, ಪುರಂದರಹರಬ್ರಹ್ಮಾದಿಭಿಃ = ಇಂದ್ರ,ರುದ್ರ,ಬ್ರಹ್ಮ ಮುಂತಾದ ದೇವತೆಗಳಿಂದ, ಪೂಜ್ಯಃ = ಪೂಜ್ಯನಾದ, ಸ್ವಾನಂದೋರುಪುರೇ = ಸ್ವರೂಪಭೂತವಾದ ಆನಂದಜ್ಞಾನಾದಿಸರ್ವಗುಣಸ್ವರೂಪವಾದ ಉತ್ಕೃಷ್ಟಶರೀರದಲ್ಲಿ ವಸನ್ = ವಾಸಮಾಡುತ್ತಿರುವ, ಪೂಜ್ಯತಮಃ = ಅತ್ಯಂತ ಪೂಜ್ಯನಾದ, ಪುರಾಣಪುರುಷಃ = ಸನಾತನಪುರುಷನಾದ

ಶ್ರೀಮನ್ನಾರಾಯಣನು, **ಅಸುಲಭಾಂ** = ಅಯೋಗ್ಯಜನರಿಗೆ ದುರ್ಲಭವಾದ, **ಭಕ್ತಿಂ** = ಭಕ್ತಿಯನ್ನು, **ಮಮ** = ನನಗೆ, **ಪ್ರದದ್ಯಾತ್** = ಕೊಡಲಿ.

**ತಾತ್ಪರ್ಯ:-** ಶ್ರೀವಿಷ್ಣುವೂ ಶರೀರವುಳ್ಳವನು. ಅವನಿಗೂ ದುಃಖಾದಿಗಳು ಸಂಭವಿಸುತ್ತವೆ. ಆದುದರಿಂದ ಸ್ವಯಂದುಃಖಿಯಾದ ಅವನು ನಮ್ಮ ಇಷ್ಟವನ್ನು ಹೇಗೆ ಕೊಡುತ್ತಾನೆ? ಎಂಬ ಸಂದೇಹವನ್ನು ಪರಿಹರಿಸುತ್ತಾ, ಭಕ್ತಿಯೇ ಪರಮಪುರುಷಾರ್ಥ-ಸಾಧನವಾದುದರಿಂದ, ಆ ಭಕ್ತಿಯನ್ನು ಪ್ರಾರ್ಥಿಸುತ್ತಾ ಸ್ತುತಿಯನ್ನು ಸಮಾಪ್ತಿಗೊಳಿಸುತ್ತಿ-ದ್ದಾರೆ. ಶ್ರೀವಿಷ್ಣುವು ದೋಷವಿಲ್ಲದ ಜ್ಞಾನ, ಆನಂದ ಮುಂತಾದ ಗುಣಗಳಿಂದ ಅತಿಶಯಪೂರ್ಣನಾಗಿರುತ್ತಾನೆ. ಅವನ ಈ ಗುಣಗಳು ಸ್ಮರಣಾದಿಗಳಿಂದ ಭಕ್ತರಿಗೆ ಪುಣ್ಯವನ್ನುಂಟುಮಾಡುತ್ತವೆ. ಅವನು ಯಾವಾಗಲೂ ಕ್ರೀಡಿಸುತ್ತಾ, ಆನಂದಿಸುತ್ತಾ ಇರುತ್ತಾನೆ. ಅವನ ಶರೀರವು ಅತ್ಯಂತ ಪ್ರಕಾಶಮಾನವಾದುದು. ಅವನು ಮಹಾಲಕ್ಷ್ಮೀ-ದೇವಿಗೂ ಅತ್ಯಂತ ಪ್ರೀತ್ಯಾಸ್ಪದವಾದ ಸ್ವಾಭಾವಿಕವಾದ ತನ್ನ ವೈಕುಂಠಾದಿ ಉತ್ತಮ-ಸ್ಥಾನಗಳಲ್ಲಿ ಇಂದ್ರ-ರುದ್ರ-ಬ್ರಹ್ಮಾದಿಗಳಿಂದ ಪೂಜಿತನಾಗಿರುತ್ತಾನೆ. ಅವನು ತನ್ನ ಸ್ವರೂಪವೇ ಆಗಿರುವ ಆನಂದಾದಿ ಅನಂತಕಲ್ಯಾಣಗುಣಾತ್ಮಕಶರೀರದಲ್ಲಿರುತ್ತಾನೆ. ಅವನ ಶರೀರಕ್ಕೂ ಅವನಿಗೂ ಭೇದವಿಲ್ಲ. ಇಂತಹ ಅತ್ಯಂತ ಪೂಜ್ಯನಾದ, ಸನಾತನಪುರುಷನಾದ ಶ್ರೀಮನ್ನಾರಾಯಣನು ಅಯೋಗ್ಯರಿಗೆ ಹೊಂದಲು ಸಾಧ್ಯವಿಲ್ಲದ ಭಕ್ತಿಯನ್ನು ಕರುಣಿಸಿ ನನ್ನನ್ನು ಉದ್ಧರಿಸಲಿ-ಎಂದು ಪ್ರಾರ್ಥಿಸಿದ್ದಾರೆ. ಜ್ಞಾನಾನಂದಾದಿಶರೀರರೂಪನಾದ ಶ್ರೀವಿಷ್ಣುವು ಭಕ್ತರ ಅಭೀಷ್ಟವನ್ನು ಕೊಡಲು ಸಮರ್ಥನಾದ್ದರಿಂದ ಅವನಲ್ಲಿ ನಾವು ಇಷ್ಟವಾದ ಮುಕ್ತಿಯನ್ನು ಪ್ರಾರ್ಥಿಸಿರುವುದು ಯುಕ್ತವೇ ಸರಿ-ಎಂದು ಭಾವ.

ಇಲ್ಲಿಗೆ ಶ್ರೀವಿಷ್ಣುಸ್ತುತಿಯ ಅನುವಾದವು ಸಮಾಪ್ತವಾಯಿತು.

ಶ್ರೀಮಧ್ವೇಶಾರ್ಪಣಮಸ್ತು.

## ನಮ್ಮ ಪ್ರಕಟಣೆಗಳು

| | | |
|---|---|---|
| 1) | ಸುಮಧ್ವವಿಜಯ ಭಾಗ -1 | ರೂ. 55.00 |
| 2) | ಸುಮಧ್ವವಿಜಯ ಭಾಗ-2 | ರೂ. 45.00 |
| 3) | ಸುಮಧ್ವವಿಜಯ ಭಾಗ- 3 | ರೂ. 50.00 |
| 4) | ಸುಮಧ್ವವಿಜಯ ಭಾಗ-4 | ರೂ. 65.00 |
| 5) | ರಾಘವೇಂದ್ರಸ್ತೋತ್ರ | ರೂ. 10.00 |
| 6) | ತೀರ್ಥಪ್ರಬಂಧ | ರೂ. 55.00 |
| 7) | ಮಣಿಮಂಜರಿ (ಮೂಲ ಮಾತ್ರ) | ರೂ. 08.00 |
| 8) | ಸ್ತೋತ್ರದೀಪಿಕಾ (ಶ್ರೀವಾದಿರಾಜಕೃತಸ್ತೋತ್ರಗಳು ಅರ್ಥಸಹಿತ) | ರೂ. 40.00 |
| 9) | ಸರಸಭಾರತೀವಿಲಾಸಃ | ರೂ. 60.00 |

## ಪ್ರತಿಗಳು ದೊರೆಯುವ ಸ್ಥಳ

ವೇದಾಂತ ಭವನ
6ನೇ ಮುಖ್ಯರಸ್ತೆ, ಚಾಮರಾಜಪೇಟೆ,
ಉಮಾಚಿತ್ರಮಂದಿರದ ಸಮೀಪ
ಬೆಂಗಳೂರು - 18
ದೂರವಾಣಿ : 26507590

ಪೂಜಾ ಬುಕ್ ಹೌಸ್
ನಂ.64, 6ನೇ ಮುಖ್ಯರಸ್ತೆ
ಚಾಮರಾಜಪೇಟೆ
ಬೆಂಗಳೂರು -18

ವಂದನಾ ಬುಕ್ ಹೌಸ್
ತ್ಯಾಗರಾಜ ಕೋ-ಆಪರೇಟಿವ್ ಬ್ಯಾಂಕ್ ಹತ್ತಿರ
4ನೇ ಮುಖ್ಯರಸ್ತೆ, 9ನೇ ಅಡ್ಡರಸ್ತೆ, ಎನ್.ಆರ್.ಕಾಲೋನಿ,
ಬೆಂಗಳೂರು -19
ದೂರವಾಣಿ - 26770826